ರಾಷ್ಟ್ರೀಯ ಜೀವನ ಚರಿತ್ರೆ ಮಾಲೆ

# ಬಸವಣ್ಣನವರು

ಎಂ. ಚಿದಾನಂದಮೂರ್ತಿ

ಅನುವಾದ

ಶಂಸ ಐತಾಳ




ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

# ಪೀಠಿಕೆ

ಬಸವಣ್ಣನವರ ಜೀವನ ಚರಿತ್ರೆಯನ್ನು ವಿಶ್ವಾಸಾರ್ಹ ರೀತಿಯಲ್ಲಿ ಈ ಪುಸ್ತಕದ ಮೂಲಕ ಓದುಗರ ಮುಂದಿಡಲು ನಾನು ಪ್ರಯತ್ನಿಸಿದ್ದೇನೆ. ಆಧಾರ ಯುಕ್ತವಾದ ಚಾರಿತ್ರಿಕ ಸಾಮಗ್ರಿಗಳ ಕೊರತೆ ನನ್ನ ಕೆಲಸವನ್ನು ಕಠಿಣ ಗೊಳಿಸಿತು. ಆದಕಾರಣ ಬಸವಣ್ಣನವರ ರಚನೆಗಳನ್ನೇ ಆಧರಿಸಿ ಅವರ ಜೀವನ ಚರಿತ್ರೆಯನ್ನು ಪುನರ‍್ರಚಿಸುವುದಲ್ಲದೆ ಅನ್ಯಮಾರ್ಗ ನನಗಿರಲಿಲ್ಲ. ಲಭ್ಯವಿರುವ ಅರ್ಧ ಚಾರಿತ್ರಿಕ ಮತ್ತು ಜನಪದ ಸಾಹಿತ್ಯವನ್ನು ಬಳಸಿ ಈ ಕೃತಿಯನ್ನು ರಚಿಸಿದ್ದೇನೆ. ಯಥಾರ್ಥವಾಗಿ ಹಾಗೂ ಉತ್ಕೃಷ್ಟವಾದ ಬಸವಣ್ಣನವರ ಜೀವನ ಚರಿತ್ರೆಯೊಂದು ಬಹುಕಾಲದಿಂದ ಅಗತ್ಯವಾಗಿತ್ತು. ಈ ಪುಸ್ತಕ ಆ ಅಗತ್ಯವನ್ನು ಪೂರೈಸುವುದೆಂದು ನಾನು ಆಶಿಸಿದ್ದೇನೆ.

ನಾನು, ಈ ಹಿಂದೆ, ಕನ್ನಡದಲ್ಲಿ ಬರೆದ ಇದೇ ಹೆಸರಿನ ಪುಸ್ತಕವನ್ನು ಪ್ರಸ್ತುತ ಕೃತಿ ಬಹುಮಟ್ಟಿಗೆ ಆಧರಿಸಿದೆ. ಈ ಕೃತಿ ಅನೇಕ ಹೊಸ ವಿಷಯಗಳ ಮೇಲೆ ಬೆಳಕು ಚೆಲ್ಲುತ್ತದೆ. ಹಾಗೂ ಇಲ್ಲಿನ ವಿಚಾರಧಾರೆ ನನ್ನ ಹಳೆಯ ಕೃತಿಯಿಂದ ಭಿನ್ನವಾಗಿದೆ. ನಾಡಿನ ಎಲ್ಲಾ ಓದುಗರೂ ಸುಲಭವಾಗಿ ಅರ್ಥ ಮಾಡಿಕೊಳ್ಳಲು ನೆರವಾಗುವಂತೆ ಅನೇಕ ಸಂಸ್ಕೃತ ಶಬ್ದಗಳನ್ನು ವಿವರಿಸಿದ್ದೇನೆ.

ನ್ಯಾಷನಲ್ ಬುಕ್ ಟ್ರಸ್ಟಿಗಾಗಿ ಹಾಗೂ ಕನ್ನಡೇತರ ಉಪಯೋಗಕ್ಕಾಗಿ ಇಂಗ್ಲೀಷಿನಲ್ಲಿ ನಾನು ಬರೆದ ಈ ಪುಸ್ತಕದ ಹಸ್ತಪ್ರತಿಯನ್ನು ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯದ ಇಂಗ್ಲೀಷ್ ಉಪಪ್ರಾಧ್ಯಾಪಕ ಶ್ರೀ ಡಿ.ಎ. ಶಂಕರ್ ಅವರು ಕೂಲಂಕಷವಾಗಿ ಪರಿಶೀಲಿಸಿ ಸೂಕ್ತ ತಿದ್ದುಪಡಿಗಳನ್ನು ಸೂಚಿಸಿದರು. ಅವರ ಟೀಕೆ ಟಿಪ್ಪಣಿಗಳು ನನ್ನ ನಿರೂಪಣೆಯನ್ನು ಬಹಳಷ್ಟು ಉತ್ತಮ ಗೊಳಿಸಿದೆ. ಅವರಿಗೆ ನನ್ನ ಅನಂತ ಧನ್ಯವಾದಗಳು.

ಎಂ. ಚಿದಾನಂದಮೂರ್ತಿ

# ಪರಿವಿಡಿ

# 1. ಬಸವಣ್ಣನವರ ಕಾಲ

ಭಾರತೀಯ ಸಮಾಜ ಮೂಲತಃ ಸಂಪ್ರದಾಯಶೀಲವಾದ್ದರಿಂದ, ತನ್ನ ಸಮಾಜಶಾಸ್ತ್ರೀಯ ನಿಲುವಿನಲ್ಲಿ ಯಾವುದೇ ತೀವ್ರ ಪರಿವರ್ತನೆಗಳು ಉಂಟಾಗಲು ಅದು ಅವಕಾಶ ಮಾಡಿಕೊಡುವುದಿಲ್ಲ ಎಂದು ಆಗಾಗ ಹೇಳಲಾಗುತ್ತದೆ. ಒಂದು ನಿರ್ದಿಷ್ಟ ಮಿತಿಯವರೆಗೆ ಈ ಅಭಿಪ್ರಾಯ ಸತ್ಯ ವಾಗಿರಬಹುದು. ಆದರೆ ಕ್ರಾಂತಿಕಾರರು ರಂಗದ ಮೇಲೆ ಕಾಣಿಸಿಕೊಂಡು ಹಿಂದೆ ಒಪ್ಪಲಾದ ಸಾಮಾಜಿಕ ರೂಢಿಗಳ ವಿರುದ್ಧ ವರ್ತಿಸಿದ ನಿದರ್ಶನ ಗಳಿವೆ. ತಮ್ಮ ಸಂಪ್ರದಾಯಗಳಿಗೆ ಅನುಸಾರವಾಗಿ ತಮ್ಮೊಂದಿಗೆ ಸಮಾಜ ವನ್ನು ನಡೆಸಿಕೊಂಡು ಹೋಗಲೂ, ತಮ್ಮ ಕನಸುಗಳಿಗೆ ಅನುಸಾರವಾಗಿ ಅದನ್ನು ರೂಪಿಸಲೂ ಅವರು ಶಕ್ತರಾಗಿದ್ದರು. ಭಾರತದ ಇತಿಹಾಸದಲ್ಲೇ ನಾವು ಕಾಣುವ ಇಂಥ ಅಪೂರ್ವ ವ್ಯಕ್ತಿಗಳಲ್ಲಿ ಬಸವಣ್ಣನವರೂ ಒಬ್ಬರಾಗಿ ದ್ದರು. ಧರ್ಮದಲ್ಲಿ ನಂಬಿಕೆಯುಳ್ಳವರಿಗೆ ಇವರೊಬ್ಬರು ಪ್ರವಾದಿ; ಸಮಾಜಶಾಸ್ತ್ರದ ವಿದ್ಯಾರ್ಥಿಗಳಿಗೆ ಸಮಾಜ ಸುಧಾರಕರು ಮತ್ತು ಕ್ರಾಂತಿಕಾರರು. ಇನ್ನು ಕೆಲವರ ದೃಷ್ಟಿಯಲ್ಲಿ ಇವರು ಸುಧಾರಕರೂ ಹೌದು; ಪ್ರವಾದಿಯೂ ಹೌದು.

**ಆಕರಗಳು.**

ಕ್ರಿ.ಶ. 12ನೆಯ ಶತಮಾನದ ಮಧ್ಯಭಾಗ ಬಸವಣ್ಣನವರ ಕಾಲ. ಭಾರತದ ಧಾರ್ಮಿಕ ಮುಖಂಡರ ಬಗ್ಗೆ ಉಪಲಬ್ಧವಿರುವಂತೆ ಬಸವಣ್ಣನವರ ಬಗ್ಗೆ ಸಮಕಾಲೀನವಾದ ಜೀವನ ಚರಿತ್ರೆ ನಮ್ಮಲ್ಲಿಲ್ಲ. ಅವರ ಕಾಲದ ಜೀವನ ಚರಿತ್ರಕಾರರೆನಿಸಿಕೊಂಡವರು ಬರೆದಿರುವುದು ಕೇವಲ ಪುರಾಣಗಳಾಗಿವೆಯೇ ಹೊರತು ಚರಿತ್ರೆಯಲ್ಲ. ಬಸವಣ್ಣನವರು ಪವಾಡಗಳನ್ನು ಮಾಡ ಬಲ್ಲವ ರಾಗಿದ್ದರೆಂಬ ತಪ್ಪು ತಿಳುವಳುಕೆಯಿಂದ ಅವರನ್ನು ದೇವರೆಂದು ಭಾವಿಸಿ ಅವರು ಅತೀಂದ್ರಿಯ ಶಕ್ತಿಗಳನ್ನೂ ಪಡೆದಿದ್ದರೆಂದು ನಂಬಲಾಗಿತ್ತು. ಆದರೂ ಜೀವನ ಚರಿತ್ರೆಯ ರೂಪರೇಖೆಗಳಿಗೆ ಸಂಬಂಧಿಸಿರುವಷ್ಟರ ಮಟ್ಟಿಗೆ ಈ ಪುರಾಣಗಳೇ ನಮಗೆ ಮಾಹಿತಿ ನೀಡುವಂತಹ ಮುಖ್ಯ ಆಕರಗಳಾಗಿವೆ. ಬಸವಣ್ಣನವರ ಬಗ್ಗೆ, ಹರಿಹರ (ಸು. ಕ್ರಿ.ಶ. 1230) ಬರೆದ 'ಬಸವರಾಜದೇವರ ರಗಳೆ' ಎಂಬ ದೀರ್ಘ ಕೃತಿಯೊಂದು ಅದೃಷ್ಟವಶಾತ್ ನಮ್ಮಲ್ಲಿದೆ. ಹರಿಹರ ಮತ್ತು ಬಸವಣ್ಣ ಇವರ ಕಾಲದ ನಡುವೆ ಹೆಚ್ಚು

ಅಂತರವಿಲ್ಲ. ಹರಿಹರನದೂ ಪುರಾಣ ಕಥೆಗಳ ಲೇಖಕರ ದೃಷ್ಟಿಕೋನವಾಗಿದೆ ಎಂಬುದರಲ್ಲಿ ಸಂದೇಹವಿಲ್ಲ. ಆದರೂ ಇವನ ಕೃತಿ ಚಾರಿತ್ರಿಕ ಮೌಲ್ಯದಿಂದ ಕೂಡಿದ ಸಾಕಷ್ಟು ಮಾಹಿತಿಗಳನ್ನು ಒಳಗೊಂಡಿದೆ. ಸ್ವತಃ ಬಸವಣ್ಣನವರೂ ಅವರ ಸಮಕಾಲೀನರಾದ ವಚನಕಾರರೂ ಬರೆದ ವಚನಗಳು ಮಾಹಿತಿಯನ್ನು ಒದಗಿಸುವ ಎರಡನೆಯ ಆಕರ. ಬಸವಣ್ಣನವರ ವಚನಗಳು ಅವರ ವ್ಯಕ್ತಿತ್ವದ ಒಂದು ನೋಟವನ್ನು ನಮಗೆ ನೀಡುತ್ತವೆ. ಹಾಗೂ ಅವರು ಮಾನಸಿಕವಾಗಿ ಮತ್ತು ಆಧ್ಯಾತ್ಮಿಕವಾಗಿ ವಿಕಾಸ ಹೊಂದಿದ ಬಗೆಯನ್ನು ಅರಿಯಲು ನಮಗೆ ನೆರವಾಗುತ್ತವೆ. ಅಲ್ಲದೆ ಅವರ ಕಾಲಕ್ಕೆ ಸೇರಿದ ಶಾಸನಗಳೂ ದೊರೆತಿವೆ. ಈ ಶಾಸನಗಳಲ್ಲಿ ಯಾವುದೂ, ಬಸವಣ್ಣನವರು ಅಥವಾ ಅವರು ಕೈಗೊಂಡ ಸುಧಾರಣೆಯನ್ನು ಕುರಿತು ಪ್ರಸ್ತಾಪಿಸದೆ ಇದ್ದರೂ, ಒಟ್ಟಿನಲ್ಲಿ ಅವರ ಕಾಲದ ರಾಜಕೀಯ, ಸಾಮಾಜಿಕ ಹಾಗೂ ಧಾರ್ಮಿಕ ಸನ್ನಿವೇಶವನ್ನು ಅರ್ಥಮಾಡಿಕೊಳ್ಳಲು ನಮಗೆ ನೆರವಾಗುತ್ತವೆ. ಬಸವಣ್ಣನವರ ಅನಂತರದ ಕಾಲಕ್ಕೆ ಸೇರಿದ ಕೆಲವು ಶಾಸನಗಳೂ ಅವರನ್ನು ಕುರಿತು ಉಲ್ಲೇಖಿಸಿವೆ. ಆದರೆ ಅವರ ಜೀವನಕ್ಕೆ ಸಂಬಂಧಿಸಿದ ಹೆಚ್ಚಿನ ಮಾಹಿತಿಗಳೇನೂ ಇವುಗಳಿಂದ ನಮಗೆ ಸಿಗುವುದಿಲ್ಲ.

ಬಸವಣ್ಣನವರು ಮತ್ತು ಅವರ ಸಮಕಾಲೀನರಿಗೆ ಸಂಬಂಧಿಸಿದ ಕಥೆಗಳನ್ನು ಆಧರಿಸಿದ ಸಮಗ್ರ ಸಾಹಿತ್ಯ ಕನ್ನಡದಲ್ಲಿ ಬೆಳೆದಿದೆ. 'ಬಸವ ಪುರಾಣಮು' ಎಂಬುದು ಪಾಲ್ಕುರಿಕೆ ಸೋಮನಾಥ (ಸು. ಕ್ರಿ.ಶ. 1260) ತೆಲುಗಿನಲ್ಲಿ ರಚಿಸಿದ ಅಮರ ಕೃತಿ. ಅನಂತರ ಕ್ರಿ.ಶ. 1369 ರಲ್ಲಿ ಭೀಮ ಕವಿ ಇದನ್ನು ಕನ್ನಡಕ್ಕೆ ಅನುವಾದಿಸಿದ್ದಾನೆ. ಈ ಕನ್ನಡ ಆವೃತ್ತಿ ಕರ್ನಾಟಕ ರಾಜ್ಯದ ಅತ್ಯಂತ ಜನಪ್ರಿಯ ಕೃತಿಗಳಲ್ಲಿ ಒಂದು. ಅಗಾಧ ಭಕ್ತಿಯೊಂದಿಗೆ ಇದರ ಪಠನ -ಅಧ್ಯಯನಗಳನ್ನು ಮಾಡಲಾಗಿದೆ. ಕರ್ನಾಟಕಾದ್ಯಂತ ಇದರ ನೂರಾರು ಹಸ್ತಪ್ರತಿಗಳು ದೊರೆತಿರುವುದೇ ಇದರ ಜನಪ್ರಿಯತೆಗೆ ಸಾಕ್ಷ್ಯವಾಗಿದೆ.

ಬಸವಣ್ಣನವರ ಜೀವನಕ್ಕೆ ಸಂಬಂಧಿಸಿದಂತೆ ಹಿಂದಿನ ಕೃತಿಗಳಲ್ಲಿ ದಾಖಲೆಗೊಂಡಂತಹ ಕೆಲವು ಸಂಗತಿಗಳು ವಿರೋಧಾತ್ಮಕವಾಗಿವೆ ಮತ್ತು ಕೆಲವು ಗಂಭೀರ ವಾಗ್ವಾದಗಳಿಗೆ ಎಡೆಮಾಡಿಕೊಟ್ಟಿವೆ. ಬಸವಣ್ಣನವರನ್ನು ದೇವರೆಂದು ಭಾವಿಸಬೇಕೇ? ಅಥವಾ ಕೆಲವು ಪರಿಮಿತಿಗಳಿಂದ ಕೂಡಿದ ಒಬ್ಬ ಮಹಾ ಮಾನವನೆಂದು ಪರಿಗಣಿಸಬೇಕೇ? ಎಂಬುದು ಪ್ರಶ್ನೆ. ಈ ಜೀವನ ಚರಿತ್ರೆಯ ಲೇಖಕ ಎರಡನೆಯ ನಿಲುವನ್ನೇ ತಾಳಿದ್ದಾನೆ. ಬಸವಣ್ಣನವರು ಮಾನವನೇ ಆಗಿದ್ದುದರಿಂದ ಮತ್ತು ಉನ್ನತ ಮಾನವೀಯ ಮೌಲ್ಯಗಳಿಂದ ಕೂಡಿದ ಕಾರ್ಯಗಳನ್ನೇ ಕೈಗೊಂಡಿದ್ದರಿಂದ ಅವರು ಮಹಾನ್ ವ್ಯಕ್ತಿಯಾದರು ಎಂಬುದು ಈ ಲೇಖಕನ ದೃಢ ನಂಬಿಕೆಯಾಗಿದೆ.

**ಸಾಮಾಜಿಕ ಹಿನ್ನೆಲೆ**

ಬಸವಣ್ಣನವರು ಜನಿಸಿದ್ದು ಜಾತಿ ಪದ್ಧತಿಯನ್ನು ಆಧರಿಸಿದ್ದ ಸಮಾಜ ದಲ್ಲಿ. ಜಾತಿ ಪದ್ಧತಿ ಎರಡು ವಿಚಾರಗಳನ್ನು ಧ್ವನಿಸುತ್ತದೆ: ಮೊದಲನೆಯ ದಾಗಿ ಪ್ರತಿಯೊಂದು ಜಾತಿಗೂ ತನ್ನದೇ ಆದ ಒಂದು ದರ್ಜೆಯಿದೆ ಎಂಬ ಅರ್ಥದಲ್ಲಿ ಜಾತಿಗಳ ಕ್ರಮಬದ್ಧ ಶ್ರೇಣಿಯೊಂದಿತ್ತು; ಎರಡನೆಯದಾಗಿ, ಪ್ರತಿಯೊಂದು ಜಾತಿಗೂ ತನ್ನದೇ ಆದ ಒಂದು ಪ್ರವೃತ್ತಿಯಿದ್ದು ಒಂದು ಜಾತಿಯಲ್ಲಿ ಹುಟ್ಟಿದವನು ತನ್ನ ಜಾತಿಯ ವೃತ್ತಿಯನ್ನೇ ಅನುಸರಿಸಿ ಕೊಂಡು ಹೋಗಬೇಕೆಂದು ನಿರೀಕ್ಷಿಸಲಾಗಿತ್ತು. ಈ ಶ್ರೇಣಿಯಲ್ಲಿ ಬ್ರಾಹ್ಮಣರು ಪಟ್ಟಿಯ ಮೆಲ್ತುದಿಯಲ್ಲಿದ್ದರು ಹಾಗೂ ಹೊಲೆಯರು ಕೆಳತುದಿಯ ಲ್ಲಿದ್ದರು. ಇವೆರಡು ಜಾತಿಗಳ ನಡುವೆ ವರ್ತಕ, ಕೃಷಿಕ, ನೇಕಾರ, ಕುಂಬಾರ ಹಾಗೂ ಇತರರಿದ್ದರು.

ಸಮಾಜದಲ್ಲಿ ಬ್ರಾಹ್ಮಣರು ವಿಶೇಷ ಗೌರವ - ಅಧಿಕಾರಗಳುಳ್ಳ ವರ್ಗಕ್ಕೆ ಸೇರಿದ್ದರು. ಇವರಲ್ಲಿ ಅನೇಕರು ಶಿಕ್ಷಿತರಾಗಿದ್ದು ಇವರನ್ನು ಜ್ಞಾನ ಸಂಸ್ಕೃತಿಗಳ ಭಂಡಾರವೆಂದು ಪರಿಗಣಿಸಲಾಗಿತ್ತು. ರಾಜ್ಯದ ಜವಾಬ್ದಾರಿ ಯುತ ಹುದ್ದೆಗಳಿಗೆ ಇವರುಗಳನ್ನೇ ನೇಮಿಸುವುದು ಅಂದಿನ ರಾಜರುಗಳ ವಾಡಿಕೆಯಾಗಿತ್ತು. ಶಾಸನಗಳಲ್ಲಿ 'ದಂಡನಾಥ' ಎಂಬ ಹುದ್ದೆ ಉಲ್ಲೇಖ ಗೊಂಡಿದ್ದು ಅಧಿಕತರವಾಗಿ ಬ್ರಾಹ್ಮಣರೇ ಈ ಹುದ್ದೆಯನ್ನು ಪಡೆಯುತ್ತಿ ದ್ದರು. ಇವರುಗಳು ವಿವಿಧ ಅಗ್ರಹಾರಗಳಿಗೆ ಸೇರಿದವರಾಗಿದ್ದರು. ರಾಜರು ಮತ್ತು ಇತರ ಶ್ರೀಮಂತರು ಬ್ರಾಹ್ಮಣರಿಗೆ ದಾನವಾಗಿ ಕೊಟ್ಟ ಗ್ರಾಮಗಳೇ ಅಗ್ರಹಾರಗಳು. ಇಂಥ ದಾನಗಳಿಂದಾಗಿ ತಮ್ಮ ಸಂಪೂರ್ಣ ಗಮನವನ್ನು ಅಧ್ಯಯನ - ಅಧ್ಯಾಪನಗಳಿಗಾಗಿ ಮೀಸಲಾಗಿಡಲು ಬ್ರಾಹ್ಮಣರಿಗೆ ಸಾಧ್ಯವಾ ಗಿತ್ತು. ಈ ಅಗ್ರಹಾರಗಳು ಕ್ರಮೇಣ ಮಹಾ ವಿದ್ಯಾಕೇಂದ್ರಗಳಾಗಿ ದೊಡ್ಡ ದೊಡ್ಡ ವಿದ್ವಾಂಸರಿಗೆ ಆಸರೆ ನೀಡಿದವು. ದೇಶದ ಎಲ್ಲ ಭಾಗಗಳಿಂದಲೂ ವಿದ್ಯಾರ್ಥಿಗಳು ಉಚ್ಚವಿದ್ಯಾಭ್ಯಾಸ ಪಡೆಯಲು ಗುಂಪು ಗುಂಪಾಗಿ ಈ ಕೇಂದ್ರಗಳಿಗೆ ಬರತೊಡಗಿದರು. ಇಲ್ಲಿ ಅಧ್ಯಯನ ಮತ್ತು ಕಲಿಕೆಗೆ ಅವಕಾಶ ವಿದ್ದಂತಹ ವಿಷಯಗಳ ಸ್ಪಷ್ಟ ಚಿತ್ರಣವನ್ನು ಶಾಸನಗಳು ನೀಡುತ್ತವೆ. ಈ ವಿಷಯಗಳಲ್ಲಿ ವೇದಗಳು, ಆರು ವೇದಾಂಗಗಳು, ಸ್ಮೃತಿಗಳು, ಪುರಾಣ ಗಳು, ವ್ಯಾಕರಣ, ಛಂದಸ್ಸು, ದರ್ಶನದ ಆರು ಪದ್ಧತಿಗಳು, ಕಾವ್ಯ, ಗಜಶಾಸ್ತ್ರ, ಹಯಶಾಸ್ತ್ರ ಮತ್ತು ವೈದ್ಯ ವಿಜ್ಞಾನಗಳು ಸೇರಿದ್ದವು.

ಅಗ್ರಹಾರದ ಮೇಲೆ ಹತೋಟಿಯನ್ನು ಇರಿಸಿಕೊಂಡ ಬ್ರಾಹ್ಮಣ ಸಮು ದಾಯದ ಸದಸ್ಯರನ್ನು 'ಮಹಾಜನ' ರೆಂದು ಕರೆಯಲಾಗಿತ್ತು. ಇವರು ಒಂದು ತಂಡದಂತೆ ಕೆಲಸ ಮಾಡುತ್ತಿದ್ದರು ಮತ್ತು ಅಗ್ರಹಾರದ ವಿವಿಧ ಚಟುವಟಿಕೆಗಳ ಮೇಲೆ ಗಮನವಿಟ್ಟಿದ್ದರು. ಕೆಲವು ಸಂದರ್ಭಗಳಲ್ಲಿ

ಮಹಾಜನರು ತಮ್ಮ ನಾಯಕನನ್ನು ಆರಿಸಿಕೊಳ್ಳುತ್ತಿದ್ದುದನ್ನೂ ಅವನ ಮಾರ್ಗ ದರ್ಶನದಲ್ಲಿ ಕೆಲಸ ಮಾಡುತ್ತಿದ್ದುದನ್ನೂ ನಾವು ನೋಡುತ್ತೇವೆ. ಬಸವಣ್ಣ ಇಂಥ ಒಬ್ಬ ನಾಯಕನ ಮಗನಾಗಿದ್ದನೆಂಬುದನ್ನು ಇಲ್ಲಿ ಹೇಳುವುದು ಯುಕ್ತವಾಗಿದೆ.

ಬ್ರಾಹ್ಮಣರದು ಸುಶಿಕ್ಷಿತರ ಹಾಗೂ ಆಧ್ಯಾತ್ಮಿಕ ಜ್ಞಾನ ಹೊಂದಿದದವರ ಸಮುದಾಯವಾಗಿತ್ತು ಎಂಬ ಸಂಗತಿ ಈ ಚಿತ್ರಣದ ಒಂದಂಶವಷ್ಟೇ ಆಗಿದೆ. ಸಮಾಜದಲ್ಲಿ ಸಾಮಾಜಿಕ ಹಾಗೂ ಧಾರ್ಮಿಕ ರಂಗದ ನಿರಂಕುಶ ಪ್ರಭುಗಳಾಗಿ ಹೊಂದಿರುವ ವಿಶೇಷಾಧಿಕಾರಗಳಿಂದಾಗಿ ಅವರಿಗೆ ತಾವು ಇತರ ಜಾತಿಗಳವರಿಗಿಂತ ಶ್ರೇಷ್ಠರೆಂಬ ಭಾವನೆಯಿತ್ತು. ತಮ್ಮ ಜಾತಿಯ ಬಗ್ಗೆ ಅವರಿಗೆ ಹೆಮ್ಮೆಯಿತ್ತು. ಆದ್ದರಿಂದ ಇತರ ಸಮುದಾಯಗಳವರನ್ನು ಅವರು ಕಡೆಗಣಿಸುತ್ತಿದ್ದರು. ಎಲ್ಲ ಮಾನವರೂ ಸರಿಸಮಾನರೆಂಬಂಥ ಕೆಲವು ಉಚ್ಚ ಆದರ್ಶಗಳನ್ನು ಬ್ರಾಹ್ಮಣರಿಗೆ ಅವರು ಅಭ್ಯಾಸ ಮಾಡಿದ್ದ ಧರ್ಮ ಗ್ರಂಥಗಳು ಬೋಧಿಸಿದ್ದುವು. ಆದರೆ ಈ ಆದರ್ಶಗಳು ಬರಿಯ ಆದರ್ಶ ಗಳಾಗಿಯೇ ಉಳಿದುವು ಹಾಗೂ ಇವು ಆಚರಣೆಗೆ ಬಂದದ್ದು ಬಹಳ ಅಪರೂಪ ಸಂದರ್ಭಗಳಲ್ಲಿ ಮಾತ್ರ. "ಶಾಸ್ತ್ರಗಳ ರೀತಿ ನೀತಿ ಒಂದಾದರೆ ಅವರದು ಮತ್ತೊಂದು" ಎಂದು ಬಸವಣ್ಣನವರು ಬ್ರಾಹ್ಮಣರನ್ನು ಖಂಡಿಸುತ್ತಾರೆ. ಹೀಗೆ ಆದರ್ಶ ಹಾಗೂ ವಸ್ತುಸ್ಥಿತಿಗಳ ನಡುವೆ ಕಂದಕವಿತ್ತು. ಅಲ್ಲದೆ ಬ್ರಾಹ್ಮಣ ಧರ್ಮ ಪ್ರಾಮುಖ್ಯವನ್ನು ಕಳೆದುಕೊಂಡ ಮತ ಕ್ರಿಯಾವಿಧಿಗಳ ಒಂದು ಸಮೂಹವಾಗಿ ಪರಿಣಮಿಸಿತು. ಬ್ರಾಹ್ಮಣರಲ್ಲಿ ಅನೇಕರಿಗೆ ಜ್ಞಾನ ಅಥವಾ ಭಕ್ತಿಗಿಂತ ಕರ್ಮವೇ ಮುಖ್ಯವಾಗಿತ್ತು. ಅವರಿಗೆ ದೇವರ ಬಗೆಗಿರುವ ಪ್ರೀತಿ ಕೇವಲ ತೋರಿಕೆಯದಾಗಿತ್ತು. ಸಮಕಾಲೀನ ಲೇಖಕನೊಬ್ಬ ಹೇಳಿದಂತೆ, ಇವರ ಭಕ್ತಿ ಮಡಕೆಯ ಚೂರಿನ ಮೇಲೆ ನೆಟ್ಟ ಪುಟ್ಟ ಸಸಿಯಂತೆ ಇತ್ತು. ತನ್ನ ಬೇರನ್ನು ಕೆಳಗೆ ಊರಲು ಅಥವಾ ಬೆಳೆದು ಫಲ ಬಿಡಲು ಅದಕ್ಕೆ ಸಾಧ್ಯವಿಲ್ಲ. ಮತ ಕ್ರಿಯಾವಿಧಿಗಳಿಂದ ಕೂಡಿದ ಇಂಥ ಧರ್ಮ ಎಂಥ ವಿಷಮಸ್ಥಿತಿಯನ್ನು ತಲುಪಬಲ್ಲದು ಎಂಬು ದನ್ನು, ಬ್ರಾಹ್ಮಣರು ಆಚರಿಸುವ ಯಜ್ಞಯಾಗಾದಿ ಸಂಸ್ಕಾರಗಳಲ್ಲಿ ನೋಡ ಬಹುದಾಗಿತ್ತು. ಅಂಥ ಯಜ್ಞಗಳಲ್ಲಿ ಪ್ರಾಣಿವಧೆ ನಡೆಯುತ್ತಿತ್ತು ಎಂದು ನಂಬಲು ಆಧಾರವಿದೆ. ಯಾಗದಲ್ಲಿ ಬಲಿಕೊಡುವುದಕ್ಕಾಗಿ ಎಳೆದು ಕೊಂಡು ಹೋಗುತ್ತಿದ್ದ ಹೋತವೊಂದು ಆರ್ತವಾಗಿ ಕೂಗುವ ಚಿತ್ರವನ್ನು ಬಸವಣ್ಣನವರು ನೀಡಿದ್ದಾರೆ.

ಉಚ್ಚಜಾತಿಯಾದ ಬ್ರಾಹ್ಮಣ ಹಾಗೂ ನೀಚಜಾತಿಯಾದ ಚಾಂಡಾಲ (ಅಸ್ಪೃಶ್ಯ) ಈ ಜಾತಿಗಳ ನಡುವೆ ಅನೇಕ ಜಾತಿಗಳಿದ್ದುವು. ಪ್ರತಿಯೊಂದು ಜಾತಿಯವರೂ ತಮ್ಮದೇ ಜಾತಿಯ ವೃತ್ತಿಯನ್ನು ಅನುಸರಿಸುತ್ತಿದ್ದರು.

ಇವುಗಳಲ್ಲಿ ಪ್ರಾಯಶಃ ಅತ್ಯಂತ ಮುಖ್ಯವಾದುದು ವರ್ತಕ ಸಮುದಾಯ. ಈ ವರ್ತಕರು ತಮ್ಮದೇ ವೃತ್ತಿಸಂಘಗಳನ್ನು ಸ್ಥಾಪಿಸಿಕೊಂಡು ಹಣಕಾಸಿನ ಸಂಪೂರ್ಣ ವ್ಯವಹಾರದ ಮೇಲೆ ನಿಯಂತ್ರಣ ಹೊಂದಿದ್ದರು. ದೇವಾಲಯಗಳಿಗೂ ಇತರ ಧಾರ್ಮಿಕ ಸಂಸ್ಥೆಗಳಿಗೂ ಇವರು ನೀಡಿದ ಉದಾರ ದಾನಗಳನ್ನು ಅನೇಕ ಶಾಸನಗಳು ದಾಖಲಿಸಿವೆ. ಆದರೆ ಎಲ್ಲ ಕಾಲದಲ್ಲಿಯೂ ಇರುವಂತೆಯೆ, ಬಡಜನರ ಮುಗ್ಧತೆಯನ್ನು ದುರುಪಯೋಗಪಡಿಸಿಕೊಂಡು, ಅವರ ಶೋಷಣೆ ಮಾಡುವ ವರ್ತಕರು ಆಗಲೂ ಇದ್ದರು. ಅವರಲ್ಲನೇಕರು, ವ್ಯಾಪಾರಕಾಲದಲ್ಲಿ ತಾವು ಮಾಡಿದ ಪಾಪಗಳು ಪರಿಹಾರ ಆಗಲೆಂಬ ಆಶಯದಿಂದ ಕೆರೆಗಳನ್ನೂ ದೇವಾಲಯಗಳನ್ನೂ ಕಟ್ಟಿಸಿದರು. ಸರಕುಗಳನ್ನು ಕೊಂಡುಕೊಳ್ಳಲಿಕ್ಕಾಗಿ ಒಂದು; ಮಾರಲಿಕ್ಕಾಗಿ ಒಂದು - ಈ ರೀತಿ ತೂಕ ಹಾಗೂ ಅಳತೆಯ ಎರಡು ಮಾನಗಳನ್ನು ಬಳಸುತ್ತಿದ್ದ ವರ್ತಕರನ್ನು ಬಸವಣ್ಣನವರ ಸಮಕಾಲೀನನೂ ಜೈನನೂ ಆಗಿದ್ದ ಬ್ರಹ್ಮಶಿವನು ತೀವ್ರವಾಗಿ ಖಂಡಿಸಿದ್ದಾನೆ. ಶ್ರೀಮಂತರು ಹಾಗೂ ಬಡವರ ನಡುವೆ ದೊಡ್ಡ ಕಂದಕವಿತ್ತು. ಶ್ರೀಮಂತರು ಎಲ್ಲ ಭೋಗಗಳನ್ನೂ ಅನುಭವಿಸುತ್ತಿದ್ದರು. ಆದರೆ ಬಡವರು ತಮ್ಮ ದಿನನಿತ್ಯದ ಆಹಾರಕ್ಕಾಗಿ ಹಗಲಿರುಳೆನ್ನದೆ ಹೆಣಗಬೇಕಾಗಿತ್ತು. ಹೀಗಿದ್ದರೂ ಸಮಾಜದಲ್ಲಿ ಶ್ರೀಮಂತರಿಗೇ ಹೆಚ್ಚು ಗೌರವವಿತ್ತು. ಜನಸಾಮಾನ್ಯರು "ಕುದುರೆ ಸತ್ತಿಗೆಯವರಿಗೆ" (ಎಂದರೆ ಶ್ರೀಮಂತರಿಗೆ) ತಲೆಬಾಗಿ ಅವರ ಕಾಲುಗಳನ್ನು ಹಿಡಿಯುತ್ತಿದ್ದರು. ಮತ್ತು ಬಡವರು ಬಂದರೆ 'ಅತ್ತ ಸರಿಯಿರಿ' ಎನ್ನುತ್ತಿದ್ದರು ಎಂದು ಬಸವಣ್ಣನವರು ಹೇಳಿದ್ದಾರೆ. ಬ್ರಾಹ್ಮಣರು ಹಾಗೂ ಶ್ರೀಮಂತರು ಸುಲಭವಾಗಿ ಅರಮನೆಗೆ ಪ್ರವೇಶ ಪಡೆದು ತಮ್ಮ ಕೆಲಸಗಳನ್ನು ಮಾಡಿಸಿಕೊಳ್ಳಲು ಶಕ್ತರಾಗಿದ್ದರು. ಕೆಳಜಾತಿಯವರೂ, ಬಡವರೂ, ಜಾತಿಹೀನರೂ ನಿಜವಾದ ದುಃಖಿಗಳಾಗಿದ್ದರು.

ಕೆಳಜಾತಿಗಳಲ್ಲಿ ಮತ್ತೆ ಬೇರೆ ಬೇರೆ ದರ್ಜೆಗಳಿದ್ದವು. ಪ್ರತಿಯೊಂದು ಜಾತಿಯೂ ತನ್ನದೇ ಆದ ಸಾಮಾಜಿಕ ಹಕ್ಕು ಬಾಧ್ಯತೆಗಳನ್ನು ಹೊಂದಿದ್ದು ಇವನ್ನು ಜಾಗರೂಕತೆಯಿಂದ ಕಾಪಾಡಿಕೊಂಡು ಬರಲಾಗಿತ್ತು. ಪ್ರಾಚೀನ ಕರ್ನಾಟಕದಲ್ಲಿ ವ್ಯಕ್ತಿ, ತನ್ನ ಸಮುದಾಯದ ಒಂದು ನೆಪ ಮಾತ್ರವಾದ ಭಾಗವಾಗಿದ್ದ. ತನ್ನ ಜಾತಿನಿಯಮಗಳ ವಿರುದ್ಧವಾಗಿ ಏನನ್ನೂ ಮಾಡದೆ, ಇರುವವರೆಗೆ ಮಾತ್ರ ಸಮಾಜದಲ್ಲಿ ಅವನ ವ್ಯಕ್ತಿತ್ವಕ್ಕೊಂದು ಬೆಲೆ ಇರುತ್ತಿತ್ತು. ಈ ನಿಯಮಗಳನ್ನು ವಿರೋಧಿಸಿ ಏನನ್ನಾದರೂ ಮಾಡಿದನೋ, ಅದನ್ನು ಗಂಭೀರವಾಗಿ ಪರಿಗಣಿಸಲಾಗುತ್ತಿತ್ತು. ಅಂಥ ವ್ಯಕ್ತಿ ಸಮುದಾಯದಿಂದ ಬಹಿಷ್ಕೃತನಾಗುತ್ತಿದ್ದ. ಜಾತಿ ಬಹಿಷ್ಕೃತರಾಗಲು ಎಲ್ಲರೂ ತುಂಬ ಹೆದರುತ್ತಿದ್ದರು. ಹೀಗಾಗಿ ಪ್ರತಿಯೊಂದು ಜಾತಿ ಒಂದೊಂದು ಅವ್ಯಕ್ತ

ಸಮುದಾಯವಾಗಿತ್ತು. ಮತ್ತು ಪ್ರತಿಯೊಂದು ಜಾತಿಯಿಂದ ಜನರೂ ಪಟ್ಟಣದ ಅಥವಾ ಗ್ರಾಮದ ವಿವಿಧ ಕೇರಿಗಳಲ್ಲಿ ವಾಸಿಸುತ್ತಿದ್ದರು. ಪ್ರತಿಯೊಂದು ಜಾತಿಯ ಜನರಿಗೂ ಇತರ ಯಾವುದೋ ಕೆಲವು ಜಾತಿಗಳಿಗಿಂತ ತಾವು ಕೆಳಗಿನವರೆಂಬ ಕೊರಗಿತ್ತು. ಆದರೆ ಈ ಕೊರಗಿನಿಂದ ಪಾರಾಗಲು, ಇತರ ಯಾವುದೋ ಕೆಲವು ಜಾತಿಗಳಿಗಿಂತ ತಾವು ಶ್ರೇಷ್ಠರೆಂದು ಭಾವಿಸಿ ತೃಪ್ತಿ ಪಡೆಯುವ ಅವಕಾಶವೂ ಅವರಿಗಿತ್ತು.

ಸಮಾಜದಲ್ಲಿ ಸ್ತ್ರೀಯರಿಗಿದ್ದ ಸ್ಥಾನಮಾನಗಳನ್ನು ಕುರಿತು ಇಲ್ಲಿ ಪರ್ಯಾಲೋಚಿಸುವುದು ಅವಶ್ಯಕ. ಅವರು ಗುರುತರ ಶಿಕ್ಷಣಕ್ಕೆ ಅರ್ಹರಲ್ಲ ಎಂಬುದು ಸಾಮಾನ್ಯ ಭಾವನೆಯಾಗಿತ್ತು. ಇದರ ಪರಿಣಾಮವಾಗಿ ಸುಶಿಕ್ಷಿತರಾಗಿ ಪುರುಷರೊಂದಿಗೆ ವಿದ್ವತ್ ಚರ್ಚೆಗಳಲ್ಲಿ ಭಾಗವಹಿಸಲು ಶಕ್ತರಾದ ಕೆಲವು ಸ್ತ್ರೀಯರನ್ನು ಮಾತ್ರ ನಾವು ನೋಡುತ್ತೇವೆ. ಇದಕ್ಕಿರುವ ಅಪವಾದಗಳಲ್ಲಿ ಒಬ್ಬಳೇ ಸಾಮಿನಿರ್ಮಡಿ. ಕ್ರಿ.ಶ. 9ನೆಯ ಅಥವಾ 10ನೆಯ ಶತಮಾನಕ್ಕೆ ಸೇರಿದ ಶಾಸನವೊಂದಲ್ಲಿ ಇವಳ ಹೆಸರು ದಾಖಲಾಗಿರುವುದು ಕಂಡುಬರುತ್ತದೆ. ರಾಜವಂಶಗಳಿಗೆ ಸೇರಿದ ಅನೇಕ ಸ್ತ್ರೀಯರು ಸುಶಿಕ್ಷಿತರಾಗಿದ್ದರು ಮತ್ತು ಸಂಗೀತ - ನೃತ್ಯಗಳಂತಹ ಲಲಿತಕಲೆಗಳಿಗೆ ವಿಶೇಷ ಗಮನವನ್ನೂ ಅವರು ನೀಡುತ್ತಿದ್ದರು. ಬ್ರಾಹ್ಮಣ ವಿದ್ವಾಂಸನೊಬ್ಬನ ಕಥೆಯಿದೆ. ಅವನ ಮಗಳು ಸಂಪೂರ್ಣ ಅಶಿಕ್ಷಿತಳಾಗಿದ್ದಳಂತೆ. ಬಾಲಕಿಗೆ ಬಾಲ್ಯದಲ್ಲಿ ಸಿಗುವ ತರಬೇತಿ ಎಷ್ಟೇ ಕಡಿಮೆಯಾಗಿರಲಿ; ಅವಳನ್ನು ಒಳ್ಳೆಯ ಗೃಹಿಣಿಯನ್ನಾಗಿ, ಮಾತೆಯನ್ನಾಗಿ ಮಾಡುವ ಉದ್ದೇಶವನ್ನು ಅದು ಹೊಂದಿರುತ್ತಿತ್ತು ಎಂದು ಮಾತ್ರ ಈ ನಿದರ್ಶನ ತೋರಿಸುತ್ತದೆ. ಕರ್ನಾಟಕದ ಕೆಲವು ಭಾಗಗಳನ್ನು ದಕ್ಷತೆಯಿಂದ ಆಳಿದ್ದ ಹಾಗೂ ಯುದ್ಧಗಳಲ್ಲೂ ಭಾಗವಹಿಸಿದ್ದ ಅಕ್ಕದೇವಿಯಂತಹ ವಿರಳ ಅಪವಾದಗಳೂ ಇದ್ದುವು. ಪುರುಷನಿಗಿಂತ ಸ್ತ್ರೀಯ ಸಾಮಾಜಿಕ ಅಂತಸ್ತು ಸಾಮಾನ್ಯವಾಗಿ ಕೆಳಮಟ್ಟದ್ದೆಂದು ಭಾವಿಸುವ ವಾಡಿಕೆಯಿತ್ತು. ಅಡಿಗೆಮನೆಯೇ ಸ್ತ್ರೀಯ ಪಾಠ ಶಾಲೆ, ಪತಿಯೇ ದೈವ ಹಾಗೂ ಅವಳ ಮೋಕ್ಷಕ್ಕೆ ಪತಿಭಕ್ತಿಯೇ ಮಾರ್ಗ ಎಂಬುದು ಸಾಮಾನ್ಯ ನಂಬಿಕೆಯಾಗಿತ್ತು.

ಅಸ್ಪೃಶ್ಯರ ಪರಿಸ್ಥಿತಿ ಶೋಚನೀಯವಾಗಿತ್ತು. ಅವರನ್ನು ಹೊಲೆಯರೆಂದೂ, ಹೊರಜಾತಿಯವರೆಂದೂ 'ಅನಾಮಿಕ'ರೆಂದೂ ಕರೆಯುತ್ತಿದ್ದರು. ಪಟ್ಟಣ ಅಥವಾ ಗ್ರಾಮವನ್ನು ಪ್ರವೇಶಿಸುವ ಮೊದಲು, ಅವರು ಆ ಬಗ್ಗೆ ತಿಳಿಸಬೇಕಾಗಿದ್ದುದರಿಂದ, ಅವರಿಗೆ 'ಸಂಬೋಳಿ'ಗಳೆಂಬ ಹೆಸರೂ ಇತ್ತು. ಹೀಗೆ ತಿಳಿಸುವುದರಿಂದ ಉಚ್ಚಜಾತಿಯವರಿಗೆ ದೂರ ಹೊರಟುಹೋಗಿ ಮೈಲಿಗೆಯಿದ ಪಾರಾಗುವುದು ಸಾಧ್ಯವಾಗುತ್ತಿತ್ತು. ಹೊರ ಜಾತಿಗಳವರು ಗ್ರಾಮಗಳ ಹೊರವಲಯಗಳಲ್ಲಿ ವಾಸಿಸುತ್ತಿದ್ದರು. ಇವರು ಗ್ರಾಮಗಳನ್ನು

ಪ್ರವೇಶಿಸುತ್ತಿದ್ದುದು ವಿರಳ ಸಂದರ್ಭಗಳಲ್ಲಿ ಮಾತ್ರ. ಇತರ ಜಾತಿಗಳವರು ಇವರೊಂದಿಗೆ ಬೆರೆಯುತ್ತಿರಲಿಲ್ಲ ಮತ್ತು ತೀವ್ರ ತಿರಸ್ಕಾರ - ಅವಹೇಳನ ಗಳೊಂದಿಗೆ ಇವರೊಡನೆ ವ್ಯವಹರಿಸುತ್ತಿದ್ದರು. ಯಾವುದೇ ಸಭ್ಯವೃತ್ತಿಯನ್ನು ಅನುಸರಿಸುವ ಅವಕಾಶವೂ ಇವರಿಗಿರಲಿಲ್ಲ. ಇವರದೇ ಪ್ರಮುಖ ಶ್ರಮಿಕ ವರ್ಗವಾಗಿತ್ತು. ಇವರಲ್ಲಿ ಅನೇಕರು ಶ್ರೀಮಂತ ಕುಟುಂಬಗಳಿಗೆ ಸೇರಿ ಹೋದಂತಿದ್ದು ಆ ಕುಟುಂಬಗಳ ದಾಸರಾಗಿ ದುಡಿಯುವುದೇ ಇವರ ಕಸುಬಾಗಿತ್ತು. ಇವರು ಕೊಳಕು ಬಟ್ಟೆ ಧರಿಸುತ್ತಿದ್ದರು; ಹುಲ್ಲು ಗುಡಿಸಲು ಗಳಲ್ಲಿ ವಾಸಿಸುತ್ತಿದ್ದರು. ಹಾಗೂ ಸತ್ತ ಪ್ರಾಣಿಗಳ ಮಾಂಸವನ್ನು ಸೇವಿಸು ತ್ತಿದ್ದರು. ಪ್ರಾಣಿಗಳ ಶವಗಳನ್ನು ಗ್ರಾಮಗಳ ಹೊರಗೆ ಕೊಂಡೊಯ್ದು ಅವುಗಳ ಚರ್ಮ ಸುಲಿದು, ಹದಮಾಡಿ ಪಾದರಕ್ಷೆ, ದೋಣಿ ಮತ್ತು ಚಾಟಿಗಳೇ ಮೊದಲಾದಂತಹ ಉಪಯುಕ್ತ ವಸ್ತುಗಳನ್ನು ತಯಾರಿಸುವುದು ಇವರ ಕರ್ತವ್ಯವಾಗಿತ್ತು. ತಾವು ತಯಾರಿಸಿದ ಈ ಸರಕುಗಳನ್ನು ಇವರು ಜೀವನ ನಿರ್ವಹಣೆಗಾಗಿ ಮಾರುತ್ತಿದ್ದರು.

ಸಮಾಜದಲ್ಲಿ ಅನೇಕ ಮೂಢನಂಬಿಕೆಗಳಿದ್ದುವು. ಇವುಗಳಲ್ಲಿ ಕೆಲವು ಸಂಪೂರ್ಣ ನಿರುಪದ್ರವಿಯಾಗಿದ್ದರೆ ಕೆಲವು ತುಂಬ ಭಯಂಕರವಾಗಿ ದ್ದುವು. ಅನೇಕ ಚಿಕ್ಕ ಪುಟ್ಟ ಪುರುಷ ಮತ್ತು ಸ್ತ್ರೀ ದೈವಗಳಿದ್ದು ಇವಕ್ಕೆ ಕೆಳಜಾತಿಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಅನುಯಾಯಿಗಳಿದ್ದರು. ಆ ಕಾಲದ ಸಾಹಿತ್ಯದಲ್ಲಿ ಇಂಥ ದೈವಗಳ ಒಂದು ಪಟ್ಟಿಯೇ ಇದೆ. ಇವುಗಳಲ್ಲಿ ಕೆಲವೆಂದರೆ, ಮೈಲಾರ, ಮಾಳಚಿ, ಎಕ್ಕನಾತಿ, ಮಾರಿ, ಮಸಣಿ, ಕೇಚರ, ಎಲ್ಲಮ್ಮ, ಭೈರವ ಮತ್ತು ಬನಶಂಕರಿ. ವೃಕ್ಷಗಳು, ಗದ್ದೆಗಳ ಗಡಿಪ್ರದೇಶ ಗಳು, ನದಿಗಳು, ಸರೋವರಗಳು, ಬಾವಿಗಳು, ಬಿಲ್ಲುಗಳು ಮತ್ತು ಅಡಿಗೆ ಪಾತ್ರೆಗಳಂತಹ ಸ್ಥಳಗಳಲ್ಲಿ ಈ ದೇವತೆಗಳು ನೆಲಸಿರುತ್ತವೆ ಎಂದು ನಂಬ ಲಾಗಿತ್ತು. ಈ ಶಕ್ತಿಗಳನ್ನು ಶಾಂತಗೊಳಿಸುವ ಹಾಗೂ ಪ್ರಸನ್ನಗೊಳಿಸುವ ಉದ್ದೇಶವನ್ನು ಹೊಂದಿದ ಅನೇಕ ವಿಲಕ್ಷಣ ಸಂಸ್ಕಾರಗಳು ಅಂದಿನ ಸಾಮಾನ್ಯ ರೂಢಿಯಾಗಿತ್ತು. ಬೆಂಕಿಯ ಕೊಂಡವನ್ನು ಹಾಯುವುದು, ಹರಿತವಾದ ಸೂಜಿಯಿಂದ ಬಾಯಿಗೆ ಬೀಗ ಹಾಕಿಕೊಳ್ಳುವುದು; ದೇಹದಲ್ಲಿ ಗಾಯ ಮಾಡಿಕೊಂಡು ರಕ್ತದ ಕೊಡುಗೆ ನೀಡುವುದು, ಮಾನವನ ಮಲ ಮೂತ್ರಗಳನ್ನು ತಲೆಯ ಮೇಲೆ ಹೊತ್ತುಕೊಂಡು ಹೋಗುವುದು, ಚಾಟಿ ಯಿಂದ ತನ್ನನ್ನು ತಾನೇ ಹೊಡೆದುಕೊಳ್ಳುವುದು, ಬೆರಳುತುದಿಗಳ ಮೇಲೆ ಬತ್ತಿಯನ್ನು ಅಂಟಿಸಿ ಅವುಗಳಿಗೆ ಉರಿಹೊತ್ತಿಸಿ ಆರತಿ ಬೆಳಗುವುದೇ ಮೊದಲಾದಂತಹ ಹರಕೆಗಳು ಈ ಸಂಸ್ಕಾರಗಳಲ್ಲಿ ಸೇರಿದ್ದುವು. ಜನರಿಗೆ ಉಂಟಾಗುವ ಎಲ್ಲ ಉಪದ್ರವಗಳಿಗೂ, ತಗಲುವ ಎಲ್ಲ ರೋಗಗಳಿಗೂ ಈ ದೈವಗಳೇ ಸಂಪೂರ್ಣ ಕಾರಣವೆಂಬ ನಂಬಿಕೆ ಇದ್ದು ಈ ದೇವತೆಗಳನ್ನು

ಪ್ರಸನ್ನಗೊಳಿಸಿ ಅನುಗ್ರಹ ಸಂಪಾದಿಸಬಹುದೆಂದೂ ಈ ಹರಕೆಗಳನ್ನು ಹೊರುತ್ತಿದ್ದರು.

ಅಶಿಕ್ಷಿತನೂ ಸಾಮಾನ್ಯನೂ ಆದ ವ್ಯಕ್ತಿಯನ್ನು ಇಲ್ಲಿ ಪುರೋಹಿತರು ಸಂಪೂರ್ಣವಾಗಿ ಶೋಷಿಸುತ್ತಿದ್ದರು. ಜನ ಸಾಮಾನ್ಯರನ್ನು ಸದಾ ಭಯದಲ್ಲಿ ಇರಿಸಲಾಗಿತ್ತು. ಅವರು ಪುರೋಹಿತರ ಕೃಪಾಕಟಾಕ್ಷದಲ್ಲಿ ಇರಬೇಕಾಗಿತ್ತು. ಪುರೋಹಿತರಿಗೆ ದೇವರ ಬಗೆಗೆ ವಿಶೇಷ ಪ್ರೀತಿಯೇನೂ ಇದ್ದಿರಲಿಲ್ಲ. ಅವರಿಗೆ ಇದು ಸುಲಭ ಜೀವನೋಪಾಯದ ಸಾಧನವಷ್ಟೇ ಆಗಿತ್ತು. 'ಭಕ್ತಿ ಎಂಬುದು ತೋರುಂಬ ಲಾಭ' ಎಂದು ಬಸವಣ್ಣನವರ ಸಮಕಾಲೀನನಾದ ಅಲ್ಲಮಪ್ರಭು ವ್ಯಂಗ್ಯವಾಗಿ ನುಡಿದಂತೆ ಧರ್ಮವೆಂಬುದು ಒಂದು ವ್ಯಾಪಾರವಾಗಿತ್ತು. ಈ ಮಾತು ಪುರೋಹಿತ ವರ್ಗಕ್ಕೇ - ಅವರು ಬ್ರಾಹ್ಮಣರಾಗಿರಲಿ, ಬ್ರಾಹ್ಮಣೇತರರಾಗಲಿ - ಅನ್ವಯಿಸುತ್ತಿತ್ತು.

**ಧಾರ್ಮಿಕ ಪರಿಸ್ಥಿತಿ :**

ಕರ್ನಾಟಕದಲ್ಲಿ ಹನ್ನೆರಡನೆ ಶತಮಾನದ ಪೂರ್ವಾರ್ಧದಲ್ಲಿ ಮುಖ್ಯವಾಗಿ ಜೈನಧರ್ಮ, ವೈಷ್ಣವ ಧರ್ಮ, ಶೈವ ಧರ್ಮ ಹಾಗೂ ಬೌದ್ಧಧರ್ಮಗಳು ಆಚರಣೆಯಲ್ಲಿದ್ದವು. ಈ ಧರ್ಮಗಳಿಗೆ ತಮ್ಮದೇ ಆದ ಇತಿಹಾಸವಿದೆ ಹಾಗೂ ಇವು ಕರ್ನಾಟಕದ ಸಾಂಸ್ಕೃತಿಕ ಪರಂಪರೆಗೆ ತಮ್ಮ ಕೊಡುಗೆ ನೀಡಿವೆ.

ಕ್ರಿ.ಪೂ. ಮೊದಲನೆಯ ಶತಮಾನದಲ್ಲಿ ಅಥವಾ ಅದಕ್ಕೂ ಮೊದಲೇ ಈ ಪ್ರಾಂತ್ಯದಲ್ಲಿ ಜೈನ ಧರ್ಮ ಕಾಲಿರಿಸಿತು. ಅನುಕ್ರಮಿಕವಾಗಿ ರಾಜ್ಯವಾಳಿದ ಸಾಮ್ರಾಟರ ಆಶ್ರಯ ಈ ಧರ್ಮಕ್ಕಿತ್ತು. ಗಂಗ ವಂಶದ ರಾಜರು ಜೈನ ಧರ್ಮಕ್ಕೆ ಅತಿ ಹೆಚ್ಚು ಪ್ರೋತ್ಸಾಹ ನೀಡಿದರು. ಕ್ರಿ.ಶ. 9 ಮತ್ತು 10ನೆಯ ಶತಮಾನಗಳ ಕಾಲದಲ್ಲಿ ಜೈನಧರ್ಮ ಅತ್ಯಂತ ಪ್ರಮುಖ ಧರ್ಮವಾಗಿತ್ತು. ಜೈನರು ಕನ್ನಡ ಭಾಷೆಯ ಅತ್ಯಂತ ಮೊದಲ ಕೃಷಿಕರಾಗಿದ್ದರು. ನಮಗೆ ತಿಳಿದಿರುವಷ್ಟರಮಟ್ಟಿಗೆ ಕನ್ನಡದ ಪ್ರಾಚೀನ ಸಾಹಿತ್ಯ ನಿರ್ಮಾಪಕರು ಜೈನರೇ ಆಗಿದ್ದಾರೆ. ಕ್ರಿ.ಶ. 10ನೆಯ ಶತಮಾನದ ಕೊನೆಯ ವೇಳೆಗೆ, ಗಂಗ ಸಾಮ್ರಾಜ್ಯದ ಪತನದೊಂದಿಗೆ, ಜೈನಧರ್ಮವೂ ಅವನತಿಯನ್ನು ಹೊಂದ ತೊಡಗಿತು. ಜನಸಮುದಾಯದ ಮೇಲಿದ್ದ ತನ್ನ ಹಿಡಿತವನ್ನು ಅದು ನಿಧಾನವಾಗಿ ಕಳೆದುಕೊಳ್ಳತೊಡಗಿತು. ಹನ್ನೆರಡನೆಯ ಶತಮಾನದ ವೇಳೆಗೆ ಅದು ತನ್ನ ಜನಪ್ರಿಯತೆಯನ್ನು ಕಳೆದುಕೊಂಡಿತ್ತು. ಅಧಿಕ ಸಂಖ್ಯೆಯಲ್ಲಿ ಜನರು ವೈಷ್ಣವ ಹಾಗೂ ಶೈವಧರ್ಮಗಳಿಗೆ ಸೇರಿದರೆಂದು ತೋರಿಸಲು ನಮ್ಮಲ್ಲಿ ಸಾಕ್ಷ್ಯಾಧಾರವಿದೆ. ಒಂದು ಕಾಲದಲ್ಲಿ ಬಹಳ ಜನಪ್ರಿಯವಾಗಿದ್ದ ಈ ಧರ್ಮ ಇತರ ಧರ್ಮಗಳಿಗೆ ತನ್ನ ಸ್ಥಳವನ್ನು ಏಕೆ ಬಿಟ್ಟುಕೊಟ್ಟಿತು ಎಂಬುದನ್ನು ವಿವರಿಸುವ ಪರಿಸ್ಥಿತಿಯಲ್ಲಿ ನಾವಿಲ್ಲ. ಹಿಂದೆಯೇ ನೋಡಿದಂತೆ, ಗಂಗ ಸಾಮ್ರಾಜ್ಯದ ಅವನತಿಯಿಂದ ಜೈನ ಧರ್ಮಕ್ಕೆ ತೀವ್ರ ವಿಪತ್ತು

ಉಂಟಾಯಿತು. ಪಾಶುಪತ ಶೈವಧರ್ಮ ಜನಪ್ರಿಯತೆ ಗಳಿಸಲು ಹೆಣಗಾಡುತ್ತಿತ್ತು. ರಾಮಾನುಜರ ಶ್ರೀವೈಷ್ಣವ ಧರ್ಮದೊಂದಿಗೆ ಈ ಪಾಶುಪತ ಶೈವಧರ್ಮವೂ ಜೈನಧರ್ಮಕ್ಕೆ ತೀವ್ರ ಭಯವನ್ನು ಉಂಟು ಮಾಡಿತು. ಆಗ ಹೆಚ್ಚು ಆಚರಣೆಯಲ್ಲಿದ್ದುದು ಜೈನಧರ್ಮ ದಿಗಂಬರ ಪಂಥ. ಸ್ತ್ರೀಯರು ಈ ಜನ್ಮದಲ್ಲಿ ಮೋಕ್ಷಕ್ಕೆ ಅರ್ಹರಲ್ಲವೆಂದು ದಿಗಂಬರ ಪಂಥ ನಂಬುತ್ತದೆ. ಯುಕ್ತವೂ ನ್ಯಾಯವೂ ಆದ ಕಾರ್ಯಗಳಿಂದ, ಮರು ಜನ್ಮದಲ್ಲಿ ಪುರುಷರಾಗಿ ಜನ್ಮವೆತ್ತಲು ಹಾಗೂ ಮೋಕ್ಷ ಪಡೆಯಲು ಅವರಿಗೆ ಸಾಧ್ಯ. ಜೈನಧರ್ಮಕ್ಕೆ ದೈವಾನುಗ್ರಹದಲ್ಲಿ ನಂಬಿಕೆಯಿಲ್ಲ. ಮೋಕ್ಷ ಸಂಪಾದನೆಗೆ ಪ್ರತಿಯೊಬ್ಬನೂ ಸ್ವತಃ ಶ್ರಮಪಡಬೇಕು ಮತ್ತು ಅದನ್ನು ಪಡೆಯಲು ಸಮರ್ಥನಾಗುವ ಮೊದಲು ಅವನು ಅನೇಕ ಜನ್ಮಗಳನ್ನು ಎತ್ತಬೇಕಾಗಿ ಬರಬಹುದು. ಸುಶಿಕ್ಷಿತನೂ ವಿಚಾರಶಕ್ತಿಯುಳ್ಳವನೂ ಆದ ವ್ಯಕ್ತಿ ಈ ವಿಚಾರಧಾರೆಯನ್ನು ಅರ್ಥಮಾಡಿಕೊಳ್ಳಬಲ್ಲ. ಆದರೆ ತನ್ನ ಮೇಲೆ ಮರುಕ ತೋರಲು ಸಿದ್ಧನಾಗಿರುವ ಪರಮಾತ್ಮನೊಬ್ಬನಿಲ್ಲದೆ ತಾನು ಹೇಗೆ ತಾನೆ ಜೀವಿಸಲು ಸಾಧ್ಯ ಎಂದು ಅರಿಯುವ ಸಾಮರ್ಥ್ಯ ಸಾಮಾನ್ಯ ಮನುಷ್ಯನಿಗೆ ಇರಲಿಲ್ಲ. ದಿಗಂಬರರು ಅಥವಾ ನಗ್ನ ಸಂತರು ಮಹಾ ಮಹಿಮರಾಗಿದ್ದರು. ಅವರ ವಿರಕ್ತ ಜೀವನ ಎಲ್ಲರ ಗೌರವಕ್ಕೂ ಪಾತ್ರವಾಗಬೇಕಾದಂತಹದಾಗಿತ್ತು. ಆದರೆ ಅವರ ನಗ್ನತೆ ಮತ್ತು ಕೊಳಕಾಗಿ ಕಾಣುವ ಅವರ ಹೊರಸ್ವರೂಪ ಹೇಗಿತ್ತೆಂದರೆ, ಹುಟ್ಟುವಾಗ ಶನಿ ದೃಷ್ಟಿ ತಾಗಿದವನು ಮಾತ್ರ ಮರುಜನ್ಮದಲ್ಲಿ ದಿಗಂಬರ ಸಂತನಾಗಿ ಹುಟ್ಟುತ್ತಾನೆ ಎಂಬ ಅಭಿಪ್ರಾಯ ಜನರಲ್ಲಿ ಮೂಡಿತ್ತು.

ಹನ್ನೆರಡನೆಯ ಶತಮಾನದ ಪೂರ್ವಾರ್ಧದಲ್ಲಿ ಶ್ರೀವೈಷ್ಣವ ಧರ್ಮ ನಿಧಾನವಾಗಿ ಜನಪ್ರಿಯವಾಗುತ್ತಿತ್ತು. ತಮಿಳುನಾಡಿನ ಚೋಳ ರಾಜರ ಕಿರುಕುಳವನ್ನು ತಡೆಯಲಾರದೆ ಕರ್ನಾಟಕದಲ್ಲಿ ಆಶ್ರಯ ಪಡೆದ ರಾಮಾನುಜಾಚಾರ್ಯರು ಈ ಮತ ಪ್ರಚಾರಕರಾಗಿದ್ದರು. ಹೊಯ್ಸಳ ರಾಜನಾದ ವಿಷ್ಣುವರ್ಧನನನ್ನು ಮತಾಂತರಗೊಳಿಸಲು ಇವರು ಶಕ್ತರಾದರು. ಈ ಧರ್ಮ ತನ್ನ ಸಾಮ್ರಾಜ್ಯದಲ್ಲಿ ದೃಢವಾಗಿ ನೆಲೆಯೂರಲು ವಿಷ್ಣುವರ್ಧನ ಸಹಾಯ ಮಾಡಿದ.

ರಾಮಾನುಜರು ಉದಾರದೃಷ್ಟಿಯವರಾಗಿದ್ದರು. ಸಂಪ್ರದಾಯಶೀಲರಾಗಿದ್ದರೂ ಅವರು ಅಸ್ಪೃಶ್ಯರ ಬಗ್ಗೆ ಕನಿಕರ ಭಾವನೆಗಳನ್ನು ಹೊಂದಿದ್ದರು. ಅಸ್ಪೃಶ್ಯರಿಗೆ ಅವರು 'ತಿರುಕುಲರು' (ಶ್ರೀಕುಲರು ಎಂದರೆ 'ದೇವರ ಕುಟುಂಬಕ್ಕೆ ಸೇರಿದವರು') ಎಂಬ ಹೆಸರನ್ನೂ ಇಟ್ಟದ್ದರೆಂದು ಹೇಳಲಾಗಿದೆ. ಭಕ್ತಿ ಅಥವಾ ದೇವರ ಬಗೆಗಿರುವ ಏಕಾಗ್ರ ಮನಸ್ಸಿನ ಅನುರಕ್ತಿ ಹಾಗೂ ಸರ್ವಶಕ್ತ ಪರಮಾತ್ಮನಿಗೆ ಸಂಪೂರ್ಣ ಶರಣಾಗುವಿಕೆ ಇವೇ ಶ್ರೀವೈಷ್ಣವ ಧರ್ಮದ

ಮುಖ್ಯಭಾವವಾಗಿತ್ತು. ಈ ಧರ್ಮ ಮತ್ತು ಬಸವಣ್ಣನವರು ಉಪದೇಶಿಸಿದ ವೀರಶೈವ ಧರ್ಮ - ಇವೆರಡರ ನಡುವೆ ಅನೇಕ ಸಾಮ್ಯಗಳಿವೆ. ಇವೆರಡೂ ಧರ್ಮಗಳು ಒಂದೇ ಕಾಂಡದಲ್ಲಿ ಹೂ ಬಿಟ್ಟಂತೆ ಕಾಣುತ್ತದೆ. ಇವುಗಳ ನಡುವಣ ಮುಖ್ಯ ವ್ಯತ್ಯಾಸವೆಂದರೆ, ಶ್ರೀವೈಷ್ಣವಧರ್ಮ ವಿಷ್ಣು ಕೇಂದ್ರೀಕೃತವಾಗಿದೆ, ಆದರೆ ವೀರಶೈವ ಧರ್ಮ ಶಿವಕೇಂದ್ರೀಕೃತವಾಗಿದೆ.

ಅಶೋಕನ ಕಾಲದಲ್ಲಿಯೇ ಕರ್ನಾಟಕಕ್ಕೆ ಬೌದ್ಧಧರ್ಮದ ಪರಿಚಯ ಆಗಿದ್ದರೂ ಅದೆಂದೂ ಜನಪ್ರಿಯ ಧರ್ಮವಾಗಲಿಲ್ಲ. ಬಳ್ಳಿಗಾವೆ, ಡಂಬಳ, ಕೋಳಿವಾಡ, ಸನ್ನತಿ ಮತ್ತು ಕದ್ರಿಗಳಲ್ಲಿ ಬೌದ್ಧಧರ್ಮದ ಕೇಂದ್ರಗಳಿದ್ದವು. ಅಲ್ಲಿ ತಾರಾದೇವಿಗೆ ಮೀಸಲಾದ ದೇವಾಲಯಗಳಿದ್ದವು ಮತ್ತು ಬಳ್ಳಿಗಾವೆ, ಡಂಬಳ ಹಾಗೂ ಕದ್ರಿಗಳಲ್ಲಿನ ವಿಹಾರಗಳು ವಿದ್ಯಾಕೇಂದ್ರಗಳೂ ಆಗಿದ್ದುವು. ಇಲ್ಲಿ ಪ್ರಚಲಿತವಾಗಿದ್ದುದು 'ವಜ್ರಯಾನ' ಅಥವಾ ಬೌದ್ಧಧರ್ಮದ ತಾಂತ್ರಿಕ ಪಂಥವಾಗಿತ್ತು. ಹನ್ನೆರಡನೆಯ ಶತಮಾನದಲ್ಲಿ ಶೈವಧರ್ಮ ಕರ್ನಾಟಕದ ಅತ್ಯಂತ ಜನಪ್ರಿಯ ಧರ್ಮವಾಗಿತ್ತು. ಶಿವಭಕ್ತರು ಆಚರಿಸುತ್ತಿದ್ದ ಶೈವಧರ್ಮ ಎಂಬುದು ಬಹಳ ವಿಶಾಲವಾದ ಅರ್ಥವನ್ನು ಹೊಂದಿದ ಶಬ್ದವಾಗಿದ್ದು, ಇದು ಅನೇಕ ಪಂಥಗಳನ್ನು ಒಳಗೊಂಡಿದೆ ಹಾಗೂ ಈ ಪಂಥಗಳ ಹೆಸರು ಗಳು ಶಾಸನಗಳಲ್ಲಿ ಮತ್ತು ಸಾಹಿತ್ಯ ಕೃತಿಗಳಲ್ಲಿ ದಾಖಲಾಗಿವೆ. ಇವುಗಳಲ್ಲಿ ಅತಿ ಪ್ರಮುಖವಾದುದು 'ಲಕುಲೀಶ ಪಾಶುಪತ' - ಈ ಪಂಥದ ಅನುಯಾಯಿಗಳು ಕರ್ನಾಟಕದಲ್ಲಿ ಅಧಿಕ ಸಂಖ್ಯೆಯಲ್ಲಿದ್ದರು. ಈ ಪಂಥವೂ 'ಕಾಳಾಮುಖ' ಅಥವಾ 'ಕಾಳಾನನ' ಎಂಬ ಹೆಸರಿನ ಇನ್ನೊಂದು ಪಂಥವೂ ಕೆಲವು ಸಾಮಾನ್ಯ ಲಕ್ಷಣಗಳನ್ನು ಹೊಂದಿದ್ದುವು. ಕಾಳಾಮುಖದ ಅನುಯಾಯಿಗಳು ತಮ್ಮ ಮುಖದ ಕಪ್ಪು ಗುರುತುಗಳನ್ನು (ಮಸಿಯನ್ನು) ಹಚ್ಚಿಕೊಳ್ಳುತ್ತಿದ್ದುದರಿಂದ ಅವರಿಗೆ ಈ ಹೆಸರು ಬಂದಿತ್ತು. ಇವೆರಡೂ ಪಂಥಗಳ ಧಾರ್ಮಿಕ ಮುಖಂಡರು ಸಾಮಾನ್ಯವಾಗಿ ಮಹಾ ವಿದ್ವಾಂಸರೂ ಮಠಾದಿಪತಿಗಳೂ ಆಗಿದ್ದರು. ಇಂಥದ್ದೊಂದು ಮಠ ಶಿವಮೊಗ್ಗ ಜಿಲ್ಲೆಯ ಬಳ್ಳಿಗಾವೆಯಲಿತ್ತು. ಇದು ಸಂನ್ಯಾಸಿಗಳ ವಾಸ ಸ್ಥಳ ವಾಗಿತ್ತು; ವಿವಿಧ ವಿಷಯಗಳನ್ನು ಕಲಿಯುವ ಹಾಗೂ ಕಲಿಸುವ ಚಿಕ್ಕ ವಿಶ್ವವಿದ್ಯಾನಿಲಯವಾಗಿತ್ತು; ಕಲಾವಿದರಿಗೆ ಪ್ರೋತ್ಸಾಹ ಕೊಡುತ್ತಿದ್ದ ಲಲಿತ ಕಲೆಗಳ ಅಕಾಡೆಮಿಯಾಗಿತ್ತು; ಉಚಿತ ಚಿಕಿತ್ಸೆ ನೀಡಲಾಗುತ್ತಿದ್ದ ವೈದ್ಯಾಲಯ ವಾಗಿತ್ತು. ಈ ಮಠಕ್ಕೆ 'ದಕ್ಷಿಣ ಕೇದಾರ' ಎಂಬ ಅಡ್ಡ ಹೆಸರಿತ್ತು ಮತ್ತು ಆ ಶತಮಾನಗಳಲ್ಲಿ ಈ ಮಠದವರು ಅತ್ಯಂತ ಪ್ರಭಾವಿಗಳಾಗಿದ್ದರು. ಈ ಪಂಥ ಗಳಿಗೆ ಸೇರಿದ ಸಂನ್ಯಾಸಿಗಳು ಮಠಗಳಲ್ಲಿ ವಾಸಿಸಿದ್ದರು. ಮತ್ತು ತಮ್ಮ ಸುತ್ತಲಿನ ಸಮಾಜದೊಂದಿಗೆ ನಿಕಟ ಸಂಪರ್ಕಗಳನ್ನು ಇಟ್ಟುಕೊಂಡಿದ್ದರು. ವಿದ್ಯಾರ್ಥಿಗಳಿಗೆ ಶಿಕ್ಷಣ ನೀಡುವುದರ ಮೂಲಕ ಹಾಗೂ ದೇವಾಲಯಗಳನ್ನೂ

ಕೆರೆಗಳನ್ನೂ ಕಟ್ಟುವುದರ ಮೂಲಕ ಸಮಾಜದ ಅಭಿವೃದ್ಧಿಗಾಗಿ ಇವರು ಹೆಣಗಿದರು. 'ನಾಥ' ಅಥವಾ 'ಕಾಪಾಲಿಕ' ಎಂಬ ಶೈವರ ಪಂಥ ಒಂದಿತ್ತು. ಈ ಪಂಥದವರು ಒಂಬತ್ತು ಮಂದಿ ನಾಥರ ಅನುಯಾಯಿಗಳಾಗಿದ್ದರು.

ಇತರ ಪಂಥಗಳೂ ಇದ್ದುವು. ಅವುಗಳಿಗೆ ಸಂಬಂಧಿಸಿದ ವಿವರಗಳನ್ನು ಇನ್ನೂ ಸಂಗ್ರಹಿಸಬೇಕಾಗಿದೆಯಷ್ಟೆ; ಉದಾಹರಣೆಗೆ, 'ಮಾರ್ಗಶೈವ', 'ಆದಿಶೈವ', 'ಅಂತ್ಯಶೈವ', ಮತ್ತು 'ಶುದ್ಧಶೈವ'ಗಳಂತಹ ಹೆಸರುಗಳು ನಮಗೆ ತಿಳಿದಿವೆ. 'ಶುದ್ಧಶೈವ'ವೂ ತಮಿಳನಾಡಿನ ಶೈವಧರ್ಮವೂ ಅಭಿನ್ನವಾಗಿದ್ದಂತೆ ಕಂಡುಬರುತ್ತದೆ. ನಾಯನಾರರು ಅಥವಾ ತಮಿಳನಾಡಿನ ಮುಮುಕ್ಷು ಸಂತರು ಐದು ಮತ್ತು ಒಂಬತ್ತನೆಯ ಶತಮಾನಗಳ ನಡುವಣ ಅವಧಿಯಲ್ಲಿ ಜೀವಿಸಿದ್ದರು ಹಾಗೂ ತಮ್ಮ ಭಕ್ತಿಸಾಹಿತ್ಯವನ್ನು ರಚಿಸಿದರು. 'ತ್ರಿಷಷ್ಟಿ ಪುರಾತನರು' ಎಂದು ಕರೆಯಲಾದ ಇವರನ್ನು ತುಂಬ ಗೌರವದೊಂದಿಗೆ ನೋಡಿಕೊಳ್ಳಲಾಗಿತ್ತು ಹಾಗೂ ಇವರ ರಚನೆಗಳನ್ನು ಕರ್ನಾಟಕದ ಶೈವಭಕ್ತರು ಭಕ್ತಿಯಿಂದ ಹಾಡುತ್ತಿದ್ದರು.

ಬಸವಣ್ಣನವರು ಮತ್ತು ಅವರ ಅನುಯಾಯಿಗಳು ಪ್ರಸಾರ ಮಾಡಿದ ವೀರಶೈವ ಧರ್ಮ ಈ ಹಿನ್ನೆಲೆಯಿಂದ ಉದಯಿಸಿತು. ಬಸವಣ್ಣನವರ ಈ ಧರ್ಮಕ್ಕಿರುವ ತಾತ್ತ್ವಿಕ ಆಧಾರವನ್ನೂ ಇದರ ಸಾಮಾಜಿಕ ಅನುಮಿತಾರ್ಥಗಳನ್ನೂ ಕುರಿತು ನಾವು ಮುಂದೆ ಚರ್ಚಿಸಲಿದ್ದೇವೆ.

# 2. ಬಾಲ್ಯ ದಿನಗಳು

ಬಸವೇಶ್ವರರು ಕರ್ನಾಟಕದ ಬಿಜಾಪುರ ಜಿಲ್ಲೆಯ ಬಾಗೇವಾಡಿ ಗ್ರಾಮದಲ್ಲಿ ಜನಿಸಿದರು. ಈ ಗ್ರಾಮವು ಬಾಗೇವಾಡಿ ಎಂಬ ತಾಲೂಕಿನ ಕೇಂದ್ರ ಸ್ಥಳ ವಾಗಿತ್ತು. ಇದಕ್ಕೆ 'ಬಸವನ ಬಾಗೇವಾಡಿ' ಎಂಬ ಹೆಸರೂ ಇದೆ. ಹನ್ನೊಂದು ಮತ್ತು ಹನ್ನೆರಡನೆಯ ಶತಮಾನಗಳಲ್ಲಿ ಇದು ಕೆಲಮಟ್ಟಿಗೆ ಪ್ರಸಿದ್ಧವಾದ ಒಂದು ಅಗ್ರಹಾರವಾಗಿತ್ತು. ತಮ್ಮ ಸಂಪೂರ್ಣ ಗಮನವನ್ನು ಕಲಿಕೆಗಾಗಿ ಮೀಸಲಿಡಲು ಸಾಧ್ಯವಾಗಲೆಂಬ ಉದ್ದೇಶದಿಂದ ಬ್ರಾಹ್ಮಣರಿಗೆ ರಾಜರು ದಾನವಾಗಿ ಕೊಟ್ಟ ಗ್ರಾಮಗಳೇ ಅಗ್ರಹಾರಗಳೆಂದು ಹಿಂದಿನ ಅಧ್ಯಾಯದಲ್ಲಿ ನಾವು ನೋಡಿದ್ದೇವೆ. ಬಾಗೇವಾಡಿಯಲ್ಲಿ ಐನೂರು ಬ್ರಾಹ್ಮಣ ಕುಟುಂಬ ಗಳೂ ಬೇರೆ ಬೇರೆ ಜಾತಿಗಳ ಇತರ ಕುಟುಂಬಗಳೂ ಇದ್ದುವು (ಅಗ್ರಹಾರ ದಲ್ಲಿ ಕೇವಲ ಬ್ರಾಹ್ಮಣ ಕುಟುಂಬಗಳೇ ಇರಬೇಕಾಗಿರಲಿಲ್ಲ), ಆ ಕಾಲದ ಶಾಸನಗಳಲ್ಲಿ ಇದನ್ನು 'ಮಹಾ ಅಗ್ರಹಾರ'ವೆಂದು ಕರೆಯಲಾಗಿದೆ. ಅಲ್ಲಿನ ಬ್ರಾಹ್ಮಣರನ್ನು ಅವರ ಅಪಾರ ವಿದ್ವತ್ತಿಗಾಗಿ ವಿಶೇಷವಾಗಿ ಪ್ರಶಂಸಿಸಲಾಗಿದೆ. ನಿಸ್ಸಂದೇಹವಾಗಿ ಆ ಗ್ರಾಮದ ಹತೋಟಿ ಬ್ರಾಹ್ಮಣರ ಕೈಯಲ್ಲಿಯೆ ಇತ್ತು. ಆದರೆ ವಿವಿಧ ವೃತ್ತಿಗಳನ್ನು ಅನುಸರಿಸುವ ಬೇರೆ ಬೇರೆ ಧಾರ್ಮಿಕ ಪಂಗಡಗಳಿಗೆ ಸೇರಿದ ಇತರ ಜನರೂ ಅಲ್ಲಿದ್ದರು. ಆ ಗ್ರಾಮದಲ್ಲಿ ಯಾವಾಗಲೂ ವೇದಮಂತ್ರಗಳೂ ಭಕ್ತಿಗೀತೆಗಳೂ ಕೇಳಿಬರುತ್ತಿದ್ದುವು. ಬ್ರಾಹ್ಮಣರಲ್ಲಿ ಬಹುಮಂದಿ ಶೈವರಾಗಿದ್ದರು ಹಾಗೂ ಅಲ್ಲಿದ್ದ ದೊಡ್ಡ ಶಿವದೇವಾಲಯವೇ ಪ್ರಾಯಶಃ ಪಟ್ಟಣದ ಚಟುವಟಿಕೆಗಳ ಕೇಂದ್ರವಾಗಿತ್ತು.

ಮಂಡಗೆಯ ಮಾದಿರಾಜ ಆ ಪಟ್ಟಣದ ಮುಖ್ಯಸ್ಥನಾಗಿದ್ದ. ಅವನ ಹೆಂಡತಿ ಮಾದಾಂಬೆ. ಅವರು ಸಾಂಖ್ಯಾಯನ' ಗೋತ್ರಕ್ಕೆ ಸೇರಿದ್ದ 'ಕಮ್ಮೆ' ಕುಟುಂಬದ ಶೈವ ಬ್ರಾಹ್ಮಣರಾಗಿದ್ದರು. ಬಹಳ ಕಾಲದ ಹಿಂದೆಯೇ ಆಂಧ್ರ ಪ್ರದೇಶದ ನೆಲ್ಲೂರು ಮತ್ತು ಗುಂಟೂರು ಪ್ರದೇಶಗಳಿಂದ ಆ ಕುಟುಂಬ ಕರ್ನಾಟಕಕ್ಕೆ ವಲಸೆ ಬಂದಿತೆಂದು 'ಕಮ್ಮೆ' ಎಂಬ ಪದವೇ ಸೂಚಿಸುತ್ತದೆ. ಅಗ್ರಹಾರದ ನಾಯಕ ಮಾದಿರಾಜನಿಗೆ ಅತ್ಯಧಿಕ ಗೌರವವಿತ್ತು. ಅವನಿಗೆ ಗಂಭೀರವಾದ ವ್ಯಕ್ತಿತ್ವವೂ ಇತ್ತು.

ಆ ದಂಪತಿಗಳಿಗೆ ದೀರ್ಘಕಾಲದವರೆಗೆ ಪುತ್ರ ಸಂತಾನವಾಗಿರಲಿಲ್ಲ. ಮಾದಾಂಬೆ ಜ್ಯೋತಿಷಿಗಳೊಂದಿಗೆ ಸಮಾಲೋಚನೆ ನಡೆಸಿದಳು. ದಂಪತಿಗಳು

ವೃಷಭ ವ್ರತವನ್ನು ಮಾಡಬೇಕೆಂದು ಅವರು ಸೂಚಿಸಿದರು. ಮಾದಾಂಬೆ ವ್ರತವನ್ನು ಕೈಗೊಂಡು ಯುಕ್ತರೀತಿಯಲ್ಲಿ ತುಂಬ ಭಕ್ತಿಯಿಂದ ಅದನ್ನು ಸಾಂಗಗೊಳಿಸಿದಳು. ಪುತ್ರಸಂತಾನವನ್ನು ಕರುಣಿಸುವಂತೆ ನಂದಿಯನ್ನು ಬೇಡಿಕೊಂಡ ಅವಳು, ಗಂಡುಮಗು ಹುಟ್ಟಿದರೆ ಅದಕ್ಕೆ ಅವನ ಹೆಸರನ್ನೇ ಇಡುವುದಾಗಿ ಹೇಳಿ ಪ್ರಾರ್ಥಿಸಿಕೊಂಡಳು. ಅನಂತರ ಅವಳಿಗೆ ಗಂಡು ಮಗು ಹುಟ್ಟಿತು. ಹೆತ್ತವರು ಮಗುವಿಗೆ ಬಸವ (ಸಂಸ್ಕೃತ : 'ವೃಷಭ') ಎಂದು ನಾಮಕರಣ ಮಾಡಿದರು. ಮಗು 'ಚಂದ್ರರಶ್ಮಿ'ಯಂತೆ ಮುದ್ದಾಗಿತ್ತು ಹಾಗೂ ತನ್ನನ್ನು ಮುದ್ದಾಡುವ ಎಲ್ಲರನ್ನೂ ನೋಡಿ ಮುಗುಳ್ನಗು ಬೀರುತ್ತಿತ್ತು.

ಮಗು ಬೆಳೆಯಿತು. ಬಸವ ಬಾಲಕನಾದ. ಅವನದು ತುಂಬ ಸಂಪ್ರದಾಯಶೀಲವಾದ ಹಾಗೂ ಸಂಸ್ಕೃತ ವಿದ್ವಾಂಸರ ಕುಟುಂಬವಾಗಿತ್ತು. ಅವನ ಮನೆಯಲ್ಲಿ ದಿನವಿಡೀ ವೇದಮಂತ್ರಗಳ ಪಾರಾಯಣ ಸಾಗುತ್ತಿತ್ತು. ಬಸವ ಅಸಂಖ್ಯಾತ ಮಂತ್ರಗಳನ್ನು ಕಂಠಪಾಠ ಮಾಡಿದ. ಯುಕ್ತವಾದ ಸ್ವರವಿನ್ಯಾಸದೊಂದಿಗೆ ಅವುಗಳನ್ನು ಪಠಿಸಲು ಅವನು ಸಮರ್ಥನಾದ. ತನ್ನ ಮಗ ಬ್ರಾಹ್ಮಣರಿಗೆ ತಕ್ಕುದಾದ ಸಂಪ್ರದಾಯ ಮಾರ್ಗದಲ್ಲಿ ಸಾಗಬೇಕೆಂದೂ, ವಿದ್ವಾಂಸ ಮತ್ತು ಬ್ರಾಹ್ಮಣ ಸಮುದಾಯದ ನಾಯಕನಾಗಬೇಕೆಂದೂ ತಂದೆ ಬಯಸಿದ್ದ. ಅಧ್ಯಯನ (=ಅಧ್ಯಯನ ಮಾಡುವುದು), ಅಧ್ಯಾಪನ (=ಪಾಠವನ್ನು ಬೋಧಿಸುವುದು), ಯಜನ (=ಯಾಗಮಾಡುವುದು), ಯಾಜನ (=ಯಾಗ ಮಾಡಿಸುವುದು), ದಾನ (=ದಾನವನ್ನು ಕೊಡುವುದು) ಮತ್ತು ಪ್ರತಿಗ್ರಹ (=ದಾನವನ್ನು ಸ್ವೀಕರಿಸುವುದು) ಗಳೆಂಬ ಷಟ್ಕರ್ಮಗಳನ್ನು ಯುಕ್ತವಾಗಿ ಆಚರಿಸುವವನೇ ಆದರ್ಶ ಬ್ರಾಹ್ಮಣ. ಸಂಕ್ಷೇಪವಾಗಿ ಹೇಳುವುದಾದರೆ, ಬಸವ ಅಂಥ ಬ್ರಾಹ್ಮಣನಾಗಬೇಕೆಂದು ಮಾದಿರಾಜ ಬಯಸಿದ್ದ. ಆದರೆ ಬಸವನ ಬದುಕು ಬೇರೆ ದಾರಿಯನ್ನು ಹಿಡಿಯಿತು.

ಬಸವ ತುಂಬ ಸಂವೇದನಶೀಲನೂ ಬುದ್ಧಿಶಾಲಿಯೂ ಆಗಿದ್ದ. ಅವನ ತಂದೆತಾಯಿಗಳು ಶ್ರೀಮಂತರೂ, ವಾತ್ಸಲ್ಯಮಯಿಗಳೂ ಆಗಿದ್ದರು. ಅಗ್ರಹಾರದ ನಾಯಕನ ಮಗನಾಗಿ ಮಕ್ಕಳಲ್ಲಿ ಬಸವನಿಗೆ ವಿಶೇಷವಾದ ಸ್ಥಾನವಿತ್ತು. ಅವನನ್ನೊಬ್ಬ ಸುಖೀ ತರುಣನನ್ನಾಗಿ ಮಾಡಲೆಂದೇ ಎಲ್ಲವನ್ನೂ ಯೋಜಿಸಲಾಗಿತ್ತೆಂಬಂತೆ ಕಾಣುತ್ತಿತ್ತು. ಬಹುಶಃ ಬಸವನ ಪಾಲಿಗೆ ಲಭ್ಯವಾಗಿದ್ದ ಆ ಸುಖಕರ ಜೀವನವೇ, ಅವನು ಲೋಕವನ್ನು ಇನ್ನೊಂದು ದೃಷ್ಟಿಯಲ್ಲಿ ಕಾಣುವಂತೆ ಮಾಡಿತು. ಅವನಿಗೆ ಕೆಲವು ಭಯಂಕರ ಅನುಭವಗಳಾದುವು. ಯಜ್ಞವೇದಿಕೆಗೆ ಎಳೆದೊಯ್ಯುತ್ತಿದ್ದ ಹೋತವೊಂದು ಆರ್ತವಾಗಿ ಚೀರುತ್ತಿದ್ದುದನ್ನು ಒಮ್ಮೆ ಅವನು ಕೇಳಿದ. ಒಮ್ಮೊಮ್ಮೆ ಅದು ಕನಸಿನಲ್ಲಿಯೂ ಕೇಳಿದಂತಾಗಿ ಅವನು ನಡುಗುತ್ತಿದ್ದ. ಇನ್ನೊಮ್ಮೆ 'ನಾಗಪಂಚಮಿ' ಉತ್ಸವದ

ಕಾಲದಲ್ಲಿ ನಾಗನ ವಿಗ್ರಹದ ಮೇಲೆ ಅವನೇ ಸ್ವತಃ ಹಾಲನ್ನೂ ತುಪ್ಪವನ್ನೂ ಎರೆದು ಪೂಜೆ ಮಾಡಿದ. ಆದರೆ ನಿಜವಾದ ಸರ್ಪವೊಂದು ಕಂಡು ಬಂದಾಗ, ಅದರ ವಿಗ್ರಹವನ್ನು ಪೂಜಿಸಿದ ಜನರೇ ಅದನ್ನು ಕೊಲ್ಲಲು ತ್ವರೆಪಟ್ಟರು. ಬಾಲಕ ಬಸವನಿಗೆ ಇದರ ಅರ್ಥ ತಿಳಿಯಲು ಸಾಧ್ಯವಾಗ ಲಿಲ್ಲ. ಅಗ್ನಿಪೂಜೆ ಮಾಡುವಲ್ಲಿ ತಂದೆಗೆ ಬಸವನೇ ಸಹಾಯ ಮಾಡುತ್ತಿದ್ದ. ಆದರೆ ಯಾವುದಾದರೂ ವಸ್ತುವಿಗೆ ಬೆಂಕಿ ಹೊತ್ತಿಕೊಂಡಾಗ, ಮರಳು ನೀರನ್ನು ಸುರಿದು ಬೆಂಕಿಯನ್ನು ನಂದಿಸಲಾಗುತ್ತಿತ್ತು. ಇದನ್ನು ಕೂಡ ಅರ್ಥಮಾಡಿಕೊಳ್ಳಲು ಬಾಲಕ ಬಸವನಿಗೆ ಸಾಧ್ಯವಾಗಲಿಲ್ಲ. ಉಳ್ಳವರ ಹಾಗೂ ಇಲ್ಲದವರ ಜೀವನಮಟ್ಟಗಳ ನಡುವಿರುವ ಅಂತರವನ್ನು ಅವನು ತಿಳಿಯ ಬಲ್ಲವನಾಗಿದ್ದ. ಸ್ವತಃ ಅವನೇ ಒಳ್ಳೆಯ ಬಟ್ಟೆಗಳನ್ನು ಧರಿಸುತ್ತಿದ್ದ; ಪುಷ್ಕಳ ಆಹಾರವನ್ನು ಸೇವಿಸುತ್ತಿದ್ದ. ಆದರೆ ಸಾಕಷ್ಟು ಅನ್ನ ವಸ್ತ್ರಗಳಿಲ್ಲದ ಮಕ್ಕಳನ್ನು ಕಂಡಾಗ ಅವರ ಬಗ್ಗೆ ಅವನಿಗೆ ಸಹಾನುಭೂತಿ ಉಂಟಾಗುತ್ತಿತ್ತು. ಅವರೊಂದಿಗೆ ಸೇರಿ ಆಡಲು ಬಯಸುತ್ತಿದ್ದ. ಆದರೆ ಹಾಗೆ ಮಾಡದಂತೆ ಅವನನ್ನು ಹೆತ್ತವರು ಕಟ್ಟುನಿಟ್ಟಾಗಿ ತಡೆಯುತ್ತಿದ್ದರು. ಆ ಮಕ್ಕಳು ಬಡವರು ಹಾಗೂ ಕೆಳಜಾತಿಗಳಿಗೆ ಸೇರಿದವರೆಂಬುದೇ ಇದಕ್ಕೆ ಸ್ವತಃ ಸಿದ್ಧವಾದ ಕಾರಣವಾಗಿತ್ತು.

ಬ್ರಾಹ್ಮಣರ ಇಂತಹ ಇಬ್ಬಗೆಯ ಜೀವನ ಕಂಡು ಬಸವನ ಸಂವೇದನ ಶಕ್ತಿಗೆ ಕಿರುಕುಳವುಂಟಾಯಿತು. ಇವರು ನಿತ್ಯವೂ ತಪ್ಪದೆ ಸ್ನಾನ ಮಾಡುತ್ತಿದ್ದರು. ತಮ್ಮ ಧಾರ್ಮಿಕ ಕರ್ತವ್ಯಗಳನ್ನು ನೆರವೇರಿಸುತ್ತಿದ್ದರು ಮತ್ತು ಪರಮಾತ್ಮನ ಬಗ್ಗೆ, ಪರಲೋಕದ ಬಗ್ಗೆ ಹಾಗೂ ಉನ್ನತ ಆದರ್ಶಗಳ ಬಗ್ಗೆ ಮಾತನಾಡುತ್ತಿದ್ದರು. ಆದರೆ ಅವರ ಹೃದಯಾಂತರಾಳದಲ್ಲಿ ಸ್ವಾರ್ಥ ಸ್ವಕೇಂದ್ರೀಯತೆಗಳು ನೆಲಸಿದ್ದುವು. ಅವರಲ್ಲಿ ಅನೇಕರಿಗೆ ಪರಮಾತ್ಮನ ಹೆಸರು ತಮ್ಮ ಐಹಿಕ ಧ್ಯೇಯಗಳನ್ನು ಸಾಧಿಸಿಕೊಳ್ಳಲು ಒಂದು ಸಾಧನ ವಷ್ಟೇ ಆಗಿತ್ತು. ವರ್ಷಾದ್ಯಂತ ಪ್ರತಿದಿನ ಮುಂಜಾವಿನಿಂದ ಸಂಜೆಯವರೆಗೆ ಅವರು ಆಚರಿಸುತ್ತಿದ್ದ ಅಸಂಖ್ಯಾತ ಸಂಸ್ಕಾರಗಳೇ ಅವರ ಧರ್ಮವಾಗಿತ್ತು. ಆದರೆ ಇವು ಅವರನ್ನು ಶ್ರೇಷ್ಠಮಾನವರನ್ನಾಗಿ ಮಾಡಲಿಲ್ಲ; ಇವುಗಳಿಂದಾಗಿ ಅವರು ಜನ ಸಾಮಾನ್ಯರಿಂದ ಇನ್ನಷ್ಟು ದೂರವಾದರಷ್ಟೇ ಎಂದು ಹೇಳಬೇಕಾಗಿಲ್ಲ.

ಹೀಗೆ ಬಸವ ಹೆಚ್ಚು ಹೆಚ್ಚು ವಿಚಾರಶೀಲನಾಗಿ ಹಾಗೂ ಆತ್ಮಪರೀಕ್ಷೆ ಮಾಡಿಕೊಳ್ಳುವವನಾಗಿ ಬೆಳೆದ. ಬಾಲ್ಯದಲ್ಲಿಯೇ ಪ್ರೌಢ ಮನಸ್ಸನ್ನು, ಎಂದರೆ ವಯಸ್ಸಿಗೆ ಮೀರಿದ ಆಲೋಚನೆಯ ಪಕ್ವತೆಯನ್ನು ಅವನು ಹೊಂದಿದ್ದ. ಅವನಿಗೆ ಸ್ನೇಹಿತರಿದ್ದರು; ಆದರೂ ಅವನು ಒಂಟಿಯಾಗಿದ್ದ. ಬಸವನ ಗೆಳೆಯರು ಅವನಲ್ಲಿ ಕೆಲವು ಆಶ್ಚರ್ಯಕರ ಗುಣವಿಶೇಷಗಳನ್ನು ಗಮನಿಸಿ

ದರು. ಅವನು ಸ್ನೇಹಶೀಲನಾಗಿದ್ದ; ಪರೋಪಕಾರಿಯಾಗಿದ್ದ; ಮೋಹಕ ವ್ಯಕ್ತಿತ್ವ ಉಳ್ಳವನೂ ಮೃದುಭಾಷಿಯೂ ಆಗಿದ್ದ. ಅವನು ಅವರ ನಾಯಕನಾಗಿದ್ದ. ಆದರೆ ಅವರ ಮೇಲೆ ಎಂದೂ ಅಧಿಕಾರ ನಡೆಸಿರಲಿಲ್ಲ. ಅವನು ಕಪಟವನ್ನು ಸಹಿಸಲಾರದವನಾಗಿದ್ದ. ಇತರರೊಂದಿಗೆ ಸೌಜನ್ಯದಿಂದ ವರ್ತಿಸದವರ ಬಗ್ಗೆ ನಿಷ್ಠುರನಾಗುತ್ತಿದ್ದ. ಈ ಸ್ವಭಾವಗಳನ್ನು ಅವನು ಅನುವಂಶಿಕವಾಗಿಯೇ ಪಡೆದನೆನ್ನಬಹುದು.

ಶಿವಭಕ್ತರ ಕಥೆಗಳನ್ನು ಕೇಳುವುದು ಬಸವನಿಗೆ ಇಷ್ಟವಾಗಿತ್ತು. ಯಾವುದೇ 'ಪ್ರಸಂಗ'ವನ್ನು ಕೇಳುವ ಅವಕಾಶವನ್ನು ಅವನು ತಪ್ಪಿಸಿಕೊಳ್ಳುತ್ತಿರಲಿಲ್ಲ. (ಪ್ರಸಂಗವೆಂದರೆ ಪುಣ್ಯ ಕಥೆಗಳ ಪ್ರವಚನ) ಇಂಥ ಪ್ರಸಂಗಗಳಲ್ಲಿ ಭಕ್ತರ ಕಥೆಗಳನ್ನು ನಿರೂಪಿಸಲಾಗುತ್ತಿತ್ತು. ಎರಡು ಕಥೆಗಳು ಬಸವನ ಮೇಲೆ ಗಾಢವಾದ ಪ್ರಭಾವವನ್ನು ಬೀರಿದವು. ಮೊದಲನೆಯದು ತಮಿಳು ನಾಡಿನ ಸಂತನಾದ ಕಣ್ಣಪ್ಪನ ಕಥೆ. ಕಣ್ಣಪ್ಪ ಒಬ್ಬ ಬೇಡ. ಅವನಿಗೆ ದೇವರ ಬಗೆಗಾಗಲಿ, ಧರ್ಮದ ಬಗೆಗಾಗಲಿ ಏನೂ ತಿಳಿದಿರಲಿಲ್ಲ. ಬೇಟೆಯೇ ಅವನ ಕಾಯಕವಾಗಿತ್ತು. ಕೊಲ್ಲುವುದು ಪಾಪವೆಂದು ಆಲೋಚಿಸಲೂ ಸಾಧ್ಯ ವಿಲ್ಲದಷ್ಟು ಅವನು ಮುಗ್ಧನಾಗಿದ್ದ. ಒಂದು ದಿನ ಬೇಟೆಗಾಗಿ ಕಾಡಿಗೆ ತೆರಳಿದ ಅವನು ಜಿಂಕೆಯೊಂದನ್ನು ಬೆನ್ನಟ್ಟಿದ. ಕಾಡಿನಲ್ಲಿ ಅವನಿಗೆ ದಾರಿ ತಪ್ಪಿಹೋಯಿತು. ಆಕಸ್ಮಿಕವೆಂಬಂತೆ ಅವನು ನಿರ್ಜನಪ್ರದೇಶದಲ್ಲಿ ಪ್ರತ್ಯೇಕ ವಾಗಿದ್ದ ಶಿವದೇವಾಲಯವೊಂದಕ್ಕೆ ಬಂದ. ಜಿಂಕೆ ಎತ್ತ ಹೋಯಿತೆಂದು ಶಿವನ ವಿಗ್ರಹವನ್ನು ಕೇಳಿದ. ಆ ವಿಗ್ರಹ ಜಿಂಕೆ ಹೋದ ದಿಕ್ಕನ್ನು ತೋರಿಸಿ, ಅದನ್ನು ಹಿಡಿಯಲು ಕಣ್ಣಪ್ಪನಿಗೆ ಸಹಾಯ ಮಾಡಿತು. ಇದರಿಂದ ಪ್ರಭಾವಿತನಾದ ಕಣ್ಣಪ್ಪ ಅಲ್ಲಿಯೇ ಉಳಿದು ಶಿವನ ಸಂಗಾತಿಯಾಗಿರುವು ದಾಗಿ ಮಾತುಕೊಟ್ಟ. ಅವನು ಪ್ರಾಣಿಗಳನ್ನು ಕೊಂದು ಅವುಗಳ ಮಾಂಸ ವನ್ನು ಶಿವನಿಗೆ ನೈವೇದ್ಯ ಮಾಡುತ್ತಿದ್ದ. ನೀರು ತರಲು ಅವನಲ್ಲಿ ಪಾತ್ರೆ ಗಳಿರಲಿಲ್ಲ. ಬಾಯಿಯಲ್ಲಿಯೇ ನೀರು ತುಂಬಿಕೊಂಡು ಬಂದು ಅದನ್ನು ಶಿವನ ವಿಗ್ರಹದ ಮೇಲೆ ಉಗುಳುತ್ತಿದ್ದ. ಆ ದೇವಾಲಯಕ್ಕೆ ಹಗಲು ಹೊತ್ತು ಮಾತ್ರ ಬಂದು ಪೂಜೆ ಮಾಡಿ ಹೋಗುವ ಅರ್ಚಕ ಒಬ್ಬನಿದ್ದ. ಆಗ ಮೋಕ್ತ ವಿಧಾನದಲ್ಲಿ ಅವನು ಪೂಜೆ ಮಾಡುತ್ತಿದ್ದ. ಅವನಿಗೆ ಪೂಜಾ ಕಾರ್ಯವೊಂದು ವೃತ್ತಿಯಾಗಿತ್ತಷ್ಟೇ ಅಲ್ಲದೆ ಅದಕ್ಕಿಂತ ಹೆಚ್ಚೇನೂ ಆಗಿರ ಲಿಲ್ಲ. ಆದರೆ ಕುತಾರ್ಕಿಕನಾದ ಬ್ರಾಹ್ಮಣ ಹಾಗೂ ಅವನ ವಿದ್ವತ್ತಿಗಿಂತ, ಅಸಂಸ್ಕೃತನಾದ ಕಣ್ಣಪ್ಪ ಹಾಗೂ ಅವನ ಮುಗ್ಧತೆಗಳೇ ಶಿವನಿಗೆ ಹೆಚ್ಚು ಪ್ರಿಯವಾದುವು. ಕಣ್ಣಪ್ಪನ ನಿಷ್ಕಪಟ ಭಕ್ತಿಯನ್ನು ಲೋಕಕ್ಕೆ ತೋರಿಸಿಕೊಡ ಬೇಕೆಂದು ಬಯಸಿದ ಅವನು ತನ್ನ ಕಣ್ಣುಗಳಿಂದ ರಕ್ತ ಸುರಿಸಲು ಪ್ರಾರಂಭಿಸಿದ. ಇದನ್ನು ನೋಡಿದ ಬ್ರಾಹ್ಮಣ ಅರ್ಚಕ ಹೆದರಿ ದೂರ ಓಡಿ

ಹೋದ. ಆದರೆ ಕಣ್ಣಪ್ಪ ತನ್ನೆರಡೂ ಕಣ್ಣುಗಳನ್ನು ಕಿತ್ತು ಶಿವನಿಗೆ ಹೃತ್ಪೂರ್ವಕವಾಗಿ ದಾನ ಮಾಡಿದ. ಪರಮಾತ್ಮ ಯಾವಾಗಲೂ ಬೆಲೆ ಕೊಡುವುದು ಅಂತರಿಕ ಪರಿಶುದ್ಧತೆಗಲ್ಲದೆ ಹೊರಗಿನ ತೋರಿಕೆಗಲ್ಲ. ತರುಣ ಬಸವನ ಕಣ್ಣುಗಳು ಕಣ್ಣೀರಿನಿಂದ ತುಂಬಿದುವು. ನೀಚ ಸಮುದಾಯದಲ್ಲಿ ಜನ್ಮ ತಾಳಿ ಪ್ರೀತಿ ಹಾಗೂ ನಿಸ್ವಾರ್ಥಗಳಿಂದ ದೈವಾನುಗ್ರಹ ಪಡೆದಂತಹ ಆ ವ್ಯಕ್ತಿ ತಾನೇ ಎಂದೂ ಕಣ್ಣಪ್ಪ ಆಗಾಗ ಭಾವಿಸಿ ಕೊಳ್ಳುತ್ತಿದ್ದ.

ಬಸವನ ಮೇಲೆ ಹೆಚ್ಚು ಪ್ರಭಾವ ಬೀರಿದ್ದ ಇನ್ನೊಂದು ಕಥೆಯೇ ಮಾದಾರ ಚೆನ್ನಯ್ಯನದು. 'ಮಾದಾರ' ಎಂದರೆ ಹೊರಜಾತಿ ಮತ್ತು ಅಸ್ಪೃಶ್ಯ. ಚೆನ್ನಯ್ಯ ಕರಿಕಾಲ ಚೋಳನ ಅಶ್ವಾಲಯಗಳಲ್ಲಿ ಕೆಲಸ ಮಾಡುತ್ತಿದ್ದ ದಾಸ. ಅವನಿಗೆ ಶಿವನ ಬಗ್ಗೆ ಸಂಪೂರ್ಣ ಪ್ರೀತಿಯಿತ್ತು. ಸ್ವತಃ ಕರಿಕಾಲ ಚೋಳನೂ ಶಿವನ ಮಹಾಭಕ್ತನೇ ಆಗಿದ್ದ. ಆದರೆ ತನ್ನನ್ನೂ ಮೀರಿಸಿದ ಭಕ್ತನೊಬ್ಬ ತನ್ನ ಕೈಕೆಳಗೆ ಕೆಲಸ ಮಾಡುತ್ತಿದ್ದುದನ್ನು ದುರದೃಷ್ಟವಶಾತ್ ಅವನು ತಿಳಿದಿರಲಿಲ್ಲ. ಪ್ರತಿದಿನ ಕರಿಕಾಲ ಚೋಳ ರಾಜಯೋಗ್ಯವಾದ ಭಕ್ಷಭೋಜ್ಯಗಳನ್ನು ದೇವರಿಗೆ ಅರ್ಪಿಸುತ್ತಿದ್ದ. ಆದರೆ ದೇವರು ಅವುಗಳನ್ನು ಸ್ವೀಕರಿಸುತ್ತಿದ್ದಿಲ್ಲ. ಚೆನ್ನಯ್ಯನ ಮನೆಯಲ್ಲಿ 'ಅಂಬಲಿ' ಅಥವಾ ಸಾಮಾನ್ಯ ಗಂಜಿಯ ರುಚಿ ನೋಡಿದ ತನಗೆ ರಾಜ ನೈವೇದ್ಯ ಮಾಡುವ ಸಿಹಿಗಳ ಬಗ್ಗೆ ಅರುಚಿ ಹುಟ್ಟಿದೆ ಎಂದು ಅವುಗಳನ್ನು ನಿರಾಕರಿಸಿದ್ದ. ರಾಜ ಚಕಿತಗೊಂಡ; ಮಹಾಮಹಿಮ ಚೆನ್ನಯ್ಯನ ಗುಡಿಸಿಲನ್ನು ಅರಸುತ್ತ ಹೊರಟ. ಮನೆಗೆ ಬಂದ ರಾಜನನ್ನು ಕಂಡು ಚೆನ್ನಯ್ಯ ಹೆದರಿದ. ಅವನಿಗೆ ಅಪಾಯದ ಭಯವುಂಟಾಯಿತು. ಆದರೆ ರಾಜ ನೇರವಾಗಿ ಚೆನ್ನಯ್ಯನಲ್ಲಿಗೆ ಬಂದು ಅವನಿಗೆ ಸಾಷ್ಟಾಂಗ ಪ್ರಣಾಮ ಮಾಡಿದ.

ದೇವರನ್ನು ಮೆಚ್ಚಿಸಲು ತನ್ನ ಸ್ವಂತ ಮಗನನ್ನೇ ಬಲಿ ಕೊಡಲು ಸಿದ್ಧನಾಗಿದ್ದ ಸಿರಿಯಾಳನ ಕಥೆ ಹಾಗೂ ಹಿಂದೆ ಮುಂದೆ ನೋಡದೆ ದೇವರಿಗೆ ತನ್ನ ಹೊಸ ಕಂಬಳಿಯನ್ನೇ ಕೊಟ್ಟುಬಿಟ್ಟ ದಾಸಿಮಯ್ಯನ ಕಥೆಗಳು ಬಸವನ ಕಿರಿಯ ಮನಸ್ಸಿನ ಮೇಲೆ ಪ್ರಭಾವ ಬೀರಿದ ಇತರ ಕಥೆಗಳಾಗಿವೆ. ಪರಮಾತ್ಮನಿಗೆ ಮಾನವನ ಯೋಗ್ಯತೆಯನ್ನು ನಿರ್ಧರಿಸಲು ಅವನ ಜನ್ಮ ಅಥವಾ ಜಾತಿ ಮುಖ್ಯವಾಗಿರಲಿಲ್ಲ ಎಂಬುದನ್ನು ಈ ಕಥೆಗಳು ಸ್ಪಷ್ಟ ಪಡಿಸಿವೆ. ಅಲ್ಲದೆ ಪರಮಾತ್ಮನನ್ನು ಅರಿಯುವ ಮಾರ್ಗದಲ್ಲಿಯೂ ಕುಲವೊಂದು ಅಡಚಣೆಯಾಗಲು ಸಾಧ್ಯ. ಏಕೆಂದರೆ ಉಚ್ಚ ಜಾತಿಯಲ್ಲಿ ಜನ್ಮ ತಾಳಿದ್ದೇನೆ ಎಂಬ ಅಂಶವೇ ಮಾನವನ 'ಅಹಂ'ಗೆ ಕಾರಣವಾಗಿದೆ. ಉದ್ದೇಶದಲ್ಲಿನ ಪ್ರಾಮಾಣಿಕತೆ ಮತ್ತು ಪರಮಾತ್ಮನನ್ನು ಅರಿಯಲು ಮಾನವ ಎಂತಹ ಭಕ್ತಿಯೊಂದಿಗೆ ಹೆಣಗುತ್ತಾನೆ ಎಂಬುದೇ ನಿಜವಾಗಿ ಮಹತ್ವದ ವಿಷಯ. ತನ್ನ ಅಶಕ್ತ ಮಗುವಿನ ಬಗ್ಗೆ ತಾಯಿಗೆ ಹೆಚ್ಚು ಪ್ರೀತಿಯಿರು

ವಂತೆ ಬಡವರ ಹಾಗೂ ತುಳಿತಕ್ಕೊಳಗಾಗಿರುವವರ ಬಗ್ಗೆ ದೇವರಿಗೂ ಹೆಚ್ಚು ಒಲವಿರಬಹುದು ಅಷ್ಟೆ; ಪರಮಾತ್ಮನನ್ನು ಅರಿಯುವಲ್ಲಿ ಧರ್ಮಗ್ರಂಥಗಳ ಜ್ಞಾನ ಒಂದು ಸಾಧನವಾಗಿದ್ದಿರಬಹುದು, ಆದರೆ ಅದು ಏಕೈಕ ಮಾರ್ಗ ವೇನೂ ಅಲ್ಲ.

ಈ ವಿಚಾರಗಳನ್ನು ಕುರಿತು ಬಸವ ತರ್ಕಬದ್ಧವಾಗಿ ಯೋಚನೆ ಮಾಡಿದ್ದನೆಂದು ನಾವಿಲ್ಲಿ ಸೂಚಿಸುತ್ತಿಲ್ಲ. ಇವು ಅವನ ಮನಸ್ಸಿನಲ್ಲಿ ಅಸ್ಪಷ್ಟ ರೂಪದಲ್ಲಿದ್ದವು. ದಿನಗಳು ಉರುಳಿದಂತೆ, ಅವನ ಹಿಂದಿನ ಆಲೋಚನೆಗಳು ಹಾಗೂ ಭಾವನೆಗಳು ಸಂಪ್ರದಾಯಗಳಾಗಿ ಹರಳುಗಟ್ಟಿದ್ದುವು. ಉಳ್ಳವರು ಮತ್ತು ಇಲ್ಲದವರ ಒಂದು ಲೋಕದಲ್ಲಿ, ನಿಯಮ-ನಿಬಂಧನೆಗಳ ಒಂದು ಲೋಕದಲ್ಲಿ ತಾನು ಜೀವಿಸುತ್ತಿದ್ದೇನೆ ಎಂದು ಅವನಿಗನಿಸಿತು. ಅದು ಅಂಧಶಾಸ್ತ್ರಗಳ ಲೋಕವಾಗಿತ್ತು. ಹಕ್ಕಿಯಂತೆ ಸ್ವಚ್ಛಂದವಾಗಿ ಹಾರಲು ಈ ಲೋಕದಲ್ಲಿ ಆತ್ಮಕ್ಕೆ ಸಾಧ್ಯವಿರಲಿಲ್ಲ. ಪರಮಾತ್ಮನಿರುವುದು ಎಲ್ಲ ಶಾಸ್ತ್ರಗಳ ಆಚೆಗೆ; ಎಲ್ಲ ಕಟ್ಟುಪಾಡುಗಳ ಆಚೆಗೆ. ತಾನೊಂದು ಕೃತಕಲೋಕದಲ್ಲಿ, ಸೆರೆಮನೆಯಲ್ಲಿ ಜೀವಿಸುತ್ತಿದ್ದೇನೆ ಎಂದು ಬಸವನಿಗೆ ಅನಿಸಿತು. ಬೆಳಕು ಹಾಗೂ ಸ್ವಾತಂತ್ರ್ಯಗಳಿರುವ ಲೋಕ ದೂರದಲ್ಲಿತ್ತು. ಅಲ್ಲಿಗೆ ಹೋಗಿ ನಿಜವಾದ ಭಕ್ತನ ಬದುಕನ್ನು, ಪರಮಾತ್ಮನ ಚರಣಗಳಿಗಲ್ಲದೆ ಇನ್ನಾವುದಕ್ಕೂ ಬದ್ಧ ವಾಗದ ಸ್ವತಂತ್ರ ಮಾನವನ ಬದುಕನ್ನು ಸಾಗಿಸಲು ಬಸವ ಬಯಸಿದ.

ಈ ಲೋಕದಿಂದ ತಪ್ಪಿಸಿಕೊಂಡು ಹೋಗುವ ಅವನ ಬಯಕೆ ತೀವ್ರ ವಾಗತೊಡಗಿತು. ತೋರಿಕೆಗಳ ಈ ಲೋಕದಲ್ಲಿ ಬದುಕುವುದು ಅವನಿಗೆ ಹೆಚ್ಚು ಹೆಚ್ಚು ಕಷ್ಟವಾಗತೊಡಗಿತು. ತನ್ನ ಆಲೋಚನೆಗಳಿಗೆ ಅಭಿವ್ಯಕ್ತಿ ನೀಡುವ ಅವಕಾಶವನ್ನು ಅವನು ಕಾಯುತ್ತಿದ್ದ. ಶೀಘ್ರವೇ ಅಂತಹ ಒಂದು ಅವಕಾಶವೂ ಒದಗಿಬಂತು. ಬಸವ ಅದನ್ನು ಬಳಸಿಕೊಂಡ. ಈ ಘಟನೆ ಬಸವನ ಬದುಕಿನಲ್ಲಿ ಬಹುಶಃ ಅತ್ಯಂತ ಮಹತ್ವದ ಘಟನೆಯಾಗಿದೆ. ಇದು ಅವನ ಸಮಗ್ರ ಜೀವನಗತಿಯನ್ನೇ ಬದಲಾಯಿಸಿತು.

ಪ್ರತಿಯೊಬ್ಬ ಬ್ರಾಹ್ಮಣ ಬಾಲಕನೂ ಉಪನಯನ ಮಾಡಿಕೊಳ್ಳಬೇಕಾಗಿತ್ತು. ಉಪನಯನವೆಂದರೆ '(ಗುರುವಿನ) ಬಳಿಗೆ ಕೊಂಡೊಯ್ಯುವುದು' ಎಂದು ಅರ್ಥ. ಯುಕ್ತವಾದ ಶಿಕ್ಷಣ ಬೋಧನೆಗಳಿಗಾಗಿ ಬಾಲಕನನ್ನು ಗುರುವಿಗೆ ಒಪ್ಪಿಸುವುದನ್ನು ಉಪನಯನವೆಂಬ ಈ ಸಂಸ್ಕಾರ ಸೂಚಿಸುತ್ತದೆ. ಐದನೆಯ ವರ್ಷದಲ್ಲಿ ಸಾಮಾನ್ಯವಾಗಿ ಬಾಲಕನಿಗೆ ಅಕ್ಷರಾಭ್ಯಾಸ ಮಾಡಿಸಿ ಶ್ಲೋಕಗಳೇ ಮೊದಲಾದವನ್ನು ಹೇಳಿಕೊಡಲಾಗುತ್ತಿತ್ತು. ಆದರೆ ನಿಜವಾದ ಸಾಂಪ್ರದಾಯಿಕ ವಿದ್ಯಾಭ್ಯಾಸ ಪ್ರಾರಂಭವಾಗುತ್ತಿದ್ದುದು ಎಂಟನೆಯ ವರ್ಷ ದಿಂದಲೇ. ಆ ವಯಸ್ಸಿನಲ್ಲಿ ಉಪನಯನ ಮಾಡಿ ಬಾಲಕನನ್ನು ಗುರುವಿನ ಬಳಿಗೆ ಕಳುಹಿಸಿಕೊಡುತ್ತಿದ್ದರು.

ಬಸವ ಆಗ ಎಂಟು ವರ್ಷದ ಬಾಲಕ. ಮಕ್ಕಳನ್ನು ಪ್ರೀತಿಸುವ ಯಾವನೇ ತಂದೆಯಂತೆ ಮಾದಿರಾಜನೂ ಮಗನ ಉಪನಯನ ನಡೆಸಲು ಸಕಲ ಏರ್ಪಾಡುಗಳನ್ನೂ ಮಾಡಿದ. ಆದರೆ ಇಂಥ ಸಂಸ್ಕಾರಗಳಲ್ಲಿ ತನಗೆ ಆಸಕ್ತಿಯಿಲ್ಲವೆಂದೂ ಜನಿವಾರ ಧರಿಸಲು ತಾನು ಸಿದ್ಧನಿಲ್ಲವೆಂದೂ ಬಸವ ತಿಳಿಸಿದಾಗ ತಂದೆಗೆ ಆಘಾತವಾದಂತಾಯಿತು. ಒಂದು ಕ್ಷಣಕಾಲ ಇದನ್ನು ನಂಬಲೂ ಅವನಿಗೆ ಸಾಧ್ಯವಾಗಲಿಲ್ಲ. ಉಪನಯನ ಬ್ರಾಹ್ಮಣ ಧರ್ಮದ ಷೋಡಶ ಸಂಸ್ಕಾರಗಳಲ್ಲಿ ಒಂದೆಂದೂ ಜನಿವಾರ ಧರಿಸದ ಹೊರತು ಅವನನ್ನು ಬ್ರಾಹ್ಮಣನೆಂದು ಭಾವಿಸಲು ಸಾಧ್ಯವಾಗದೆಂದೂ ಮಗನಿಗೆ ಮನವರಿಕೆ ಮಾಡಿಕೊಡಲು ತಂದೆ ಪ್ರಯತ್ನಿಸಿದ. ಅವನು ಬ್ರಾಹ್ಮಣನಾಗಿ ಜನಿಸಿರುವುದೇ ಒಂದು ಭಾಗ್ಯವೆಂದೂ ಸ್ಪಷ್ಟಪಡಿಸಿದ. ಆದರೆ ತಂದೆಯ ಉಪದೇಶಕ್ಕೆ ಬಸವ ಕೊಂಚವೂ ಕಿವಿಗೊಡಲಿಲ್ಲ. ಬ್ರಾಹ್ಮಣಧರ್ಮ ಮತ್ತು ಭಕ್ತಿ - ಇವೆರಡೂ ಪರಸ್ಪರ ವಿರುದ್ಧವಾದುವು ಎಂದಷ್ಟೇ ಅವನು ಸಂಕ್ಷಿಪ್ತ ವಾಗಿ ಹೇಳಿದ. ಬ್ರಾಹ್ಮಣನಾದ ಮಾತ್ರಕ್ಕೆ ವ್ಯಕ್ತಿ ಎಂದಿಗೂ ದೇವಪುತ್ರನಾಗಲಾರ; ದೇವನಿಗೆ ಪ್ರೀತಿಪಾತ್ರನಾದ ವ್ಯಕ್ತಿ ದೈವಾನುಗ್ರಹ ಸಂಪಾದನೆಗಾಗಿ ಬ್ರಾಹ್ಮಣ ಧರ್ಮವನ್ನೇ ತ್ಯಜಿಸಬೇಕು ಎಂದೂ ಬಸವ ವಾದಿಸಿದ. ಬ್ರಾಹ್ಮಣ ಧರ್ಮ ಕೇವಲ ಕರ್ಮವನ್ನು ಉಪದೇಶಿಸುವುದಲ್ಲದೆ ಭಕ್ತಿಯನ್ನಲ್ಲವೆಂದೂ ಅವನು ಮತ್ತೆ ವಾದಿಸಿದ. ಉಪನಯನವನ್ನು ಕುರಿತಂತೆ ಅವನ ಅಭಿಪ್ರಾಯ ಅಚಲ ವಾಗಿತ್ತು. ಉಪನಯಕ್ಕೆ ಒಪ್ಪಲೇಬೇಕೆಂದು ಒತ್ತಾಯಿಸಿದ ಪಕ್ಷದಲ್ಲಿ ಮನೆ ಬಿಟ್ಟು ಪಲಾಯನ ಮಾಡುತ್ತೇನೆಂದೂ ಅವನು ಹೆದರಿಸಿದ. ಮಾದಿರಾಜನಿಗೆ ಹೇಗಾದರೂ ಮಾಡಿ ಮಗನ ಉಪನಯನವನ್ನು ಪೂರೈಸಬೇಕಾಗಿತ್ತು. ಏಕೆಂದರೆ ಇದು ಮಗನನ್ನು ದ್ವಿಜನನ್ನಾಗಿಸುವ ಪ್ರಶ್ನೆಯಷ್ಟೇ ಆಗಿರದೆ, ಅವನ ಕುಟುಂಬದ ಪ್ರತಿಷ್ಠೆಯ ಪ್ರಶ್ನೆಯೂ ಆಗಿತ್ತು. ವಾತ್ಸಲ್ಯದಿಂದ ಕೇಳಿಕೊಳ್ಳುವುದರ ಮೂಲಕ ಬಸವನ ತಾಯಿಯೂ ಅವನ ಮೇಲೆ ಒತ್ತಡ ತಂದಂತೆ ಕಾಣುತ್ತದೆ. ಕೊನೆಗೂ ಮನಸ್ಸಿಲ್ಲದ ಮನಸ್ಸಿನಿಂದಲೇ ಅವನು ಉಪನಯನಕ್ಕೆ ಒಪ್ಪಿದ. ಅವನ ಪಾಲಿಗೆ ಅದೊಂದು ಚಿತ್ರಹಿಂಸೆಯಾಗಿತ್ತು. ಆದರೆ ಅವನು ಅದನ್ನು ಸಹಿಸಿಕೊಳ್ಳಲೇಬೇಕಾಗಿತ್ತು. ಇಡೀ ಸಮಾರಂಭ ಅವನಿಗೆ ಅರ್ಥಹೀನವಾಗಿ ಕಂಡು ಬಂತು. ಅವನು ಜನಿವಾರ ಧರಿಸಿದ. ವಿದ್ಯಾಭ್ಯಾಸಕ್ಕಾಗಿ ಅವನನ್ನು ಗುರುವಿನ ಬಳಿಗೆ ಕರೆದೊಯ್ಯಲಾಯಿತು. ದೊಡ್ಡ ವಿಪತ್ತೊಂದು ಪರಿಹಾರವಾದ್ದರಿಂದ ಬಸವನ ತಂದೆ ತಾಯಿಗಳು ಸಮಾಧಾನದ ನಿಟ್ಟುಸಿರುಬಿಟ್ಟರು.

# 3. ಸ್ವೇಚ್ಛಾ ವಿಹಾರಿ

ವಿಪತ್ತು ಪರಿಹಾರಗಲಿಲ್ಲ; ಅದು ಮುಂದೂಡಲ್ಪಟ್ಟಿತು, ಅಷ್ಟೇ! ತೀವ್ರ ಅಸಮಾಧಾನದೊಡನೆಯೇ ಬಸವ ಉಪನಯನವಾಗಲು ಒಪ್ಪಿದ್ದ. ತಾನು ಧರಿಸಿದ ಯಜ್ಞೋಪವೀತ ಬಂಧನದ ಸಂಕೇತವೆಂದು ಅವನಿಗನಿಸಿತು. ಸಮಾಜದಲ್ಲಿ ತಾನು ಕಂಡ ಹಾಗೂ ಅನುಭವಿಸಿದ ಎಲ್ಲ ಕೆಡುಕುಗಳಿಗೂ ಯಜ್ಞೋಪವೀತ ಒಂದು ಸಂಕೇತವಾಗಿರುವಂತೆ ಅವನಿಗೆ ಕಂಡುಬಂತು. ಆದರೂ ಬಲವಂತಕ್ಕೊಳಗಾಗಿ ಮತ್ತು ಸ್ವಲ್ಪವೂ ಇಚ್ಛೆಯಿಲ್ಲದೆಯೇ ಉಪನಯನೋತ್ತರ ಸಂಸ್ಕಾರಗಳನ್ನು ಅವನು ಆಚರಿಸಿದ. ತನ್ನ ಹಿರಿಯರು ಮಾಡಿದಂತೆ ಅವನೂ, ಗಿಳಿಯಂತೆ, ಗಾಯಿತ್ರೀ ಮಂತ್ರವನ್ನು ಜಪಿಸಿದ.

ಅವನ ಸಾಂಪ್ರದಾಯಿಕ ಶಿಕ್ಷಣ ಪ್ರಾರಂಭವಾಯಿತು. ಅನೇಕ ಮಹಾನ್ ವಿದ್ವಾಂಸರು ಅವನ ಊರಿನಲ್ಲೇ ವಾಸವಿದ್ದು ಅವರುಗಳು ಅನೇಕರಿಗೆ ಕಲಿಸುತ್ತಿದ್ದರೆಂಬುದನ್ನು ನಾವು ಈಗಾಗಲೇ ಮನಗಂಡಿದ್ದೇವೆ. ಆದ್ದರಿಂದ ಅವನು ಗುರುಗಳನ್ನು ಅರಸಿಕೊಂಡು ಬೇರೆ ಊರಿಗೆ ಹೋಗಬೇಕಾಗಿ ಇರಲಿಲ್ಲ. ತನ್ನೂರಿನಲ್ಲಿಯೇ ಇರುವ ಸಮರ್ಥ ವಿದ್ವಾಂಸರಲ್ಲಿ ಅವನು ವೇದಗಳನ್ನೂ, ಆರು ವೇದಾಂಗಗಳನ್ನೂ ಅಭ್ಯಾಸ ಮಾಡಿದ. ವ್ಯಾಕರಣ, ಛಂದಸ್ಸು, ಸಂಗೀತ, ಸಾಹಿತ್ಯ, ದರ್ಶನದ ಆರು ಪದ್ಧತಿಗಳು, 'ಹರರ ಹಸ್ಯಾಗಮ'ದಂತಹ ಶಿವಾಗಮಗಳು ಮೊದಲಾದುವನ್ನೂ ಅವನು ಅಧ್ಯಯನ ಮಾಡಿದ (ಬಸವ ತನ್ನ ಕಾಲದ ಸಾಂಪ್ರದಾಯಿಕ ಶಿಕ್ಷಣದಲ್ಲಿ ಆಳವಾದ ಪರಿಣತಿ ಹೊಂದಿದ್ದನೆಂದೂ ಅಧ್ಯಯನದ ವಿವಿಧ ಶಾಖೆಗಳಲ್ಲಿ ಪ್ರಭುತ್ವ ಪಡೆದಿದ್ದನೆಂದೂ ಅವನ ಅನಂತರದ ರಚನೆಗಳು ತೋರಿಸುತ್ತವೆ). ಬಸವ ತುಂಬ ಬುದ್ಧಿಶಾಲಿಯಾಗಿದ್ದ. ಇತರರು ಅಸೂಯೆ ಪಡುವಂತಹ ಜ್ಞಾಪಕ ಶಕ್ತಿ ಅವನಿಗಿತ್ತು.

ಅಧ್ಯಯನ ವಿಷಯಗಳಲ್ಲಿ ವೇದಗಳಿಗೆ ಅಪೂರ್ವ ಸ್ಥಾನವಿತ್ತು. ವೇದ ಮಂತ್ರಗಳ ಅರ್ಥವನ್ನು ತಿಳಿದುಕೊಳ್ಳದಿದ್ದರೂ ಸರಿಯೇ, ನಿರ್ದಿಷ್ಟಪಡಿಸ ಲಾದ ಕ್ರಮದಲ್ಲಿ ವಿದ್ಯಾರ್ಥಿ ಅವುಗಳನ್ನು ಕಂಠಪಾಠ ಮಾಡಬೇಕೆಂಬುದು ವ್ಯಾಪಕವಾದ ಅಭಿಪ್ರಾಯವಾಗಿತ್ತು. ಯುಕ್ತವಾದ ಕ್ರಮದಲ್ಲಿ ಯಾಂತ್ರಿಕವಾಗಿ ವೇದಮಂತ್ರಗಳ ಪಾರಾಯಣ ಮಾಡಬೇಕೆಂದಷ್ಟೇ ಬಲವಂತಪಡಿಸಲಾಗಿತ್ತು. ಈ ಪದ್ಧತಿಯನ್ನು ಬಸವ ತೀವ್ರವಾಗಿ ವಿರೋಧಿಸಿದ. ತಮ್ಮ ವಚನಗಳಲ್ಲೊಂ

ದರಲ್ಲಿ, ವೈದಿಕ ಸಾಹಿತ್ಯದ ಅರ್ಥವನ್ನರಿಯದೆ ಅವುಗಳನ್ನು ತಮ್ಮ ತಲೆಯಲ್ಲಿ ತುಂಬಿಸಿಕೊಂಡ ವಿದ್ವಾಂಸರನ್ನು, ಬಟ್ಟೆಗಳನ್ನು ಹೊತ್ತುಕೊಂಡು ಹೋಗುವ ಕತ್ತೆಗಳಿಗೆ ಬಸವಣ್ಣನವರು ಹೋಲಿಸಿದ್ದಾರೆ. ವೇದಗಳು ಕರ್ಮಕ್ಕೇ ಹೆಚ್ಚು ಮಹತ್ವ ಕೊಡುತ್ತವೆ ಎಂಬ ಸಾಮಾನ್ಯ ನಂಬಿಕೆಗೆ ವ್ಯತಿರಿಕ್ತವಾಗಿ, ಅವು ಪರಮಾತ್ಮ ಹಾಗೂ ಭಕ್ತಿಯ ಮಹಿಮೆಯನ್ನು ಕೂಡ ಸಾರುತ್ತವೆ ಎಂದು ಬಸವ ಭಾವಿಸಿದ್ದ. ಸಾಂಪ್ರದಾಯಿಕ ಶಿಕ್ಷಣ ಬಸವನಲ್ಲಿರುವ ವಿದ್ವಾಂಸನನ್ನು ಮಾತ್ರ ತೃಪ್ತಿಪಡಿಸಿತು. ಆದರೆ ಅವನಲ್ಲಿರುವ ಭಕ್ತನ ಅಪೇಕ್ಷೆಗಳನ್ನು ಅದು ಪೂರೈಸಲಿಲ್ಲ.

ದಿನಗಳು ಉರುಳಿದಂತೆ, ಬ್ರಾಹ್ಮಣ ಧರ್ಮದ ಆಚರಣೆಗಳೆಲ್ಲವನ್ನೂ ಪರಿಪಾಲಿಸುವುದು ಸಾಧ್ಯವಿಲ್ಲವೆಂದು ಬಸವನಿಗೆ ತಿಳಿದುಬಂತು. ಕೆಳಜಾತಿಯವರೊಂದಿಗೆ ಮೇಲ್ಜಾತಿಯವರು ಸರಿಯಾಗಿ ನಡೆದುಕೊಳ್ಳುತ್ತಿಲ್ಲವೆಂಬ ವಾಸ್ತವ ಸಂಗತಿ ಅವನಿಗೆ ಸಂಪೂರ್ಣವಾಗಿ ಮನದಟ್ಟಾಯಿತು. ಈ ಅನ್ಯಾಯವನ್ನು ಪ್ರತಿಭಟಿಸಲು ಅವನು ಪ್ರಾರಂಭಿಸಿದ. ತಂದೆ ತಾಯಿಗಳೊಡನೆ ಹಾಗೂ ಸಮಾಜದೊಡನೆ ಅವನ ಮೊದಲ ಘರ್ಷಣೆ ಉಪನಯನದ ಸಂದರ್ಭದಲ್ಲೇ ನಡೆದಿತ್ತು. ಘರ್ಷಣೆಗಳು ಹೆಚ್ಚುತ್ತಾ ಬಂದು ಭಿನ್ನಾಭಿಪ್ರಾಯಗಳ ಅಂತರ ಅಧಿಕಗೊಳ್ಳಲಾರಂಭಿಸಿತು. ತಂದೆಗೆ ಇದೊಂದು ನುಂಗಲಾರದ ತುತ್ತಾಗಿದ್ದಿರಬೇಕು. ಮಗನ ಮೇಲಿನ ಮಮತೆಗಷ್ಟೇ ಅಲ್ಲದೆ ತನ್ನ ಬ್ರಾಹ್ಮಣಿಕೆಗೇ ಭಾರಿ ಆಘಾತವಾಗಿದ್ದು ತಂದೆಯ ಈ ಪರಿಸ್ಥಿತಿಗೆ ಕಾರಣವಾಗಿರಬೇಕು. ಇದಕ್ಕೆ ವ್ಯತಿರಿಕ್ತವಾಗಿ ಬಸವ ತಂದೆಯ ಭಾವನೆಗಳ ಬಗ್ಗೆ ಚಿಂತಿಸಿದಂತೆಯೇ ಕಾಣಲಿಲ್ಲ. ತನ್ನೆದುರಿಗಿರುವ ಯಾವ ಪರಿಣಾಮಗಳನ್ನಾದರೂ ಎದುರಿಸಲು ಅವನು ಸಿದ್ಧನಾಗಿಯೇ ಇದ್ದ.

ತಂದೆ ಮಗನ ಈ ಘರ್ಷಣೆ ಪರಾಕಾಷ್ಠೆಗೆ ಬರುವ ಮೊದಲೇ ಅವನ ತಾಯಿ ತಂದೆಯರು ತೀರಿಕೊಂಡರು. ತಮ್ಮ ಮಗ ಸಂಪೂರ್ಣವಾಗಿ ದಾರಿತಪ್ಪಿದನೆಂಬ, ಹಾಗೂ ಯಶಸ್ವೀ ಜೀವನದಿಂದ ವಂಚಿತನಾದನೆಂಬ ದುಃಖದೊಡನೆಯೇ ಅವರು ಅಸುನೀಗಿರಬೇಕು. ಆಗ ಬಸವ 16 ವರ್ಷದ ಹುಡುಗನಾಗಿದ್ದ. ಅವನ ಬಗ್ಗೆ ಅಲ್ಪ ಸ್ವಲ್ಪ ಪ್ರೀತಿ ಹಾಗೂ ಅನುಕಂಪ ತೋರುತ್ತಿದ್ದ ಅಜ್ಜಿಯನ್ನು ಬಿಟ್ಟರೆ ಅವನ ವೃತ್ತದಲ್ಲಿ ಬೇರಾರೂ ಇರಲಿಲ್ಲ. ಅವನಿಗೀಗ ಹೆತ್ತವರ ರಕ್ಷಣೆಯೂ ಇರಲಿಲ್ಲ. ಸಮಾಜ ಅವನತ್ತ ತುಂಬ ನಿಷ್ಠುರವಾಗಿತ್ತು. ಆದ್ದರಿಂದ ಅವನು ಸಮಾಜದಿಂದ ದೂರಹೋಗುವ ದೃಢ ಹಾಗೂ ಅಂತಿಮ ನಿರ್ಧಾರವನ್ನು ಕೈಗೊಂಡ. ತನ್ನ ಶರೀರವನ್ನು ಬಿಗಿಯಾಗಿ ಬಂಧಿಸಿದ 'ಕರ್ಮಲತೆ'ಯಂತಿದ್ದ ಜನಿವಾರವನ್ನು ತುಂಡು ತುಂಡು ಮಾಡಿ ಬಿಸಾಡಿದ. ಬ್ರಾಹ್ಮಣಧರ್ಮ ಮತ್ತು ಸಮಾಜದೊಂದಿಗೆ ತನ್ನ ಸಂಬಂಧಗಳನ್ನು ಕಡಿದುಕೊಳ್ಳುವುದಕ್ಕೆ ಇದು ಸಂಕೇತವಾಯಿತು.

ಸಂಪ್ರದಾಯಶೀಲರಲ್ಲಿ ದೊಡ್ಡ ಕೋಲಾಹಲವನ್ನೆಬ್ಬಿಸಿದ್ದಿರಬೇಕು. ಇದರ ಪರಿಣಾಮವಾದ ಟೀಕೆ ಬೆದರಿಕೆಗಳನ್ನು ಅವನು ಸ್ವಲ್ಪ ಕಾಲ ಧೈರ್ಯದಿಂದ ಎದುರಿಸಿದನೆಂದೂ ಕಾಣುತ್ತದೆ. ಪರಿಸ್ಥಿತಿ ಅಸಾಧ್ಯವೆನಿಸಿದಾಗ ಊರು ಬಿಟ್ಟು ಹೋಗಲು ತೀರ್ಮಾನಿಸಿದ. ಅಲ್ಲಿಯ ಶೈವರು ಅವನಿಗೆ ನೆರವು ನೀಡಲು ಮುಂದೆ ಬಂದರೂ ಸಹ ತನ್ನ ಅಕ್ಕನಾದ ಅಕ್ಕ ನಾಗಮ್ಮನೊಂದಿಗೆ ಊರು ಬಿಟ್ಟು ಕೂಡಲಸಂಗಮ ಅಥವಾ ಕಪ್ಪಡಿ ಸಂಗಮಕ್ಕೆ ಬಂದನು.

ಕೂಡಲಸಂಗಮ ಬಿಜಾಪುರ ಜಿಲ್ಲೆಯಲ್ಲಿನ ಒಂದು ಚಿಕ್ಕ ಗ್ರಾಮ. 'ಕೂಡಲು' ಮತ್ತು 'ಸಂಗಮ' ಇವೆರಡೂ ಶಬ್ದಗಳ ಅರ್ಥ ಒಂದೇ. 'ನದಿಗಳು ಒಟ್ಟು ಸೇರುವ ಸ್ಥಳ' ಎಂಬುದು ಈ ಶಬ್ದಗಳ ಅರ್ಥ. ಕೂಡಲಸಂಗಮ ತುಂಬ ಸುಂದರವಾದ ಸ್ಥಳ. ಇಲ್ಲಿ ಮಲಪ್ರಭಾ ನದಿ ಕೃಷ್ಣಾ ನದಿಯನ್ನು ಸೇರುತ್ತದೆ. ಈ ಸಂಗಮಸ್ಥಳದ ಸಮೀಪವೇ ದೇವಾಲಯ ಒಂದಿದೆ. ಇಲ್ಲಿಯ ದೇವರು ಸಂಗಮೇಶ್ವರ. ಈ ಸ್ಥಳಕ್ಕೆ ಕಪ್ಪಡಿಸಂಗಮ ಎಂಬ ಹೆಸರೂ ಇತ್ತು. ಕಪ್ಪಡಿಯೆಂಬುದು ಸಂಸ್ಕೃತ ಶಬ್ದವಾದ 'ಕರ್ಪಟ'ಯ ಅಪಭ್ರಂಶ ರೂಪ. 'ಕರ್ಪಟ'ಯೆಂದರೆ ಚಿಂದಿಬಟ್ಟೆಗಳನ್ನು ಧರಿಸಿದ ಭಿಕ್ಷುಕ ಅಥವಾ ಸಂನ್ಯಾಸಿ. ಕೂಡಲ ಸಂಗಮ ಒಂದು ಪವಿತ್ರ ಸ್ಥಳ. ಆಗಾಗ ಶೈವಸಂತರು ಈ ಕ್ಷೇತ್ರವನ್ನು ಸಂದರ್ಶಿಸುತ್ತಿದ್ದರು. ಆ ಕಾಲದಲ್ಲಿ ಇದೊಂದು ಪ್ರಖ್ಯಾತ ಕ್ಷೇತ್ರವಾಗಿತ್ತು. ಕೂಡಲಸಂಗಮಕ್ಕೆ ಬರುವುದನ್ನೇ ಬಸವ ಆಯ್ದುಕೊಂಡುದಕ್ಕೆ, ಅಲ್ಲಿ ತಾನು ಬೆರೆಯಬಲ್ಲ ಜನರಿದ್ದರು ಎಂಬುದು ಕಾರಣವಾಗಿರದೆ, ತಾನು ಗುಪ್ತಭಕ್ತಿಯನ್ನು ಇಟ್ಟಂತಹ ಕೂಡಲ ಸಂಗಮನ ಅಥವಾ ಸಂಗಮೇಶ್ವರನ ದೇವಾಲಯ ಅಲ್ಲಿದ್ದುದೇ ಕಾರಣ ಆಗಿತ್ತು. ದೇವಾಲಯಕ್ಕೆ ಬರುತ್ತಿದ್ದಂತೆ, ಅಂದಿನವರೆಗೂ ಅವನು ಅದುಮಿ ಇಟ್ಟಂತಹ ಭಾವನೆಗಳು ಮಾತಾಗಿ ಅಭಿವ್ಯಕ್ತಿ ಪಡೆದುವು. ಅವನು ದೇವರನ್ನು ತಂದೆಯೆಂದು ಕರೆದ; ತಾಯಿಯೆಂದು ಕರೆದ. ತನ್ನ ಸರ್ವಸ್ವ ಎಂದು ಸಂಬೋಧಿಸಿದ. ಎಲ್ಲ ಐಹಿಕ ಸಂಬಂಧಗಳನ್ನು ತ್ಯಜಿಸಿ ಅವುಗಳ ಸ್ಥಾನದಲ್ಲಿ ದೇವರನ್ನು ಪ್ರತಿಷ್ಠಾಪಿಸಲು ಬಸವ ಸಿದ್ಧನಾಗಿದ್ದ. ಆಗ ಸುಳಿಗಾಳಿಗೆ ಸಿಕ್ಕ ಹಡಗಿನಂತಹ ಅವನ ಜೀವನ ತನ್ನ ನೆಲೆಯನ್ನು ಕಂಡಿತು. ಕೂಡಲ ಸಂಗಮದಲ್ಲಿಯೇ ನೆಲೆಸಲು ಬಸವ ನಿರ್ಧರಿಸಿದ.

ಆ ದೇವಾಲಯ ಒಬ್ಬ ಸ್ಥಾನಿಕನ ಅಥವಾ ದೇವಾಲಯದ ಅಧಿಕಾರಿಯ ಆಡಳಿತಕ್ಕೆ ಒಳಪಟ್ಟಿತ್ತು. ಅವನ ಹೆಸರು ಈಶಾನ್ಯಗುರು. ಅವನು ಲಕುಲೀಶ ಪಾಶುಪತ ಪಂಥಕ್ಕೆ ಸೇರಿದವನೆಂದೂ ದೇವಾಲಯದ ಆವರಣದ ಒಳಗೆ ವಾಸಿಸುವ ಸಂನ್ಯಾಸಿಯೆಂದೂ ಆ ಹೆಸರೇ ಸೂಚಿಸುತ್ತದೆ. ಬಸವನಿಗೆ ದೇವರ ಬಗೆಗೆ ಇರುವ ಅಪಾರ ಒಲವನ್ನು ಈಶಾನ್ಯಗುರು ಗಮನಿಸಿದ. ಬಸವನ ಶ್ರೇಷ್ಠತೆಯನ್ನು ಗುರುತಿಸಿದವರಲ್ಲಿ ಬಹುಶಃ ಈಶಾನ್ಯಗುರುವೇ ಮೊತ್ತ

ಮೊದಲಿಗ. ಬಸವ ತುಂಬ ನೊಂದವನೆಂದು ತಿಳಿಯಲು ಕೂಡ ಅವನಿಗೆ ಕಷ್ಟವಾಗಲಿಲ್ಲ. ದೇವಾಲಯದಲ್ಲಿ ಬಸವನೊಂದಿಗೆ ತಾನು ಇರುವುದಾಗಿ ತಿಳಿಸಿ ಈಶಾನ್ಯಗುರು ಅವನನ್ನು ಸಂತೈಸಿದ. ಪೂಜೆಗೆ ತಿಳಿನೀರು ಹಾಗೂ ಹೊಸ ಹೂವುಗಳನ್ನು ತರುವ ಕೆಲಸವನ್ನು ಬಸವನಿಗೆ ವಹಿಸಿದ. ಬಸವ ಸಂತೋಷದಿಂದಲೇ ಈ ಕೆಲಸವನ್ನು ಒಪ್ಪಿಕೊಂಡ.

ಬಸವನ ಅಕ್ಕ ಎಲ್ಲಿ ಹೋದಳೆಂದು ನಮಗೆ ತಿಳಿಯದು. ತನ್ನ ಮೇಲೆ ಅನುಕಂಪ ತೋರಿದ ಯಾವುದೋ ಒಂದು ಕುಟುಂಬದೊಂದಿಗೆ ಆಕೆ ಕೂಡಲಸಂಗಮ ಗ್ರಾಮದಲ್ಲಿಯೇ ನೆಲಸಿರಬೇಕು.

ಬಸವ ಬೆಳಗ್ಗೆ ಬೇಗ ಏಳುತ್ತಿದ್ದ. ಹೊಸ ಹೂವುಗಳನ್ನೂ ತಿಳಿನೀರನ್ನೂ ತರುತ್ತಿದ್ದ. ಇದು ಅವನಿಗೆ ಪ್ರೀತಿಯ ಕೆಲಸವಾಗಿದ್ದು ದೇವಾಲಯವೇ ಅವನಿಗೆ ಸರ್ವಸ್ವವಾಗಿತ್ತು. ಅಲ್ಲಿ ಯಾವುದೇ ನಿರ್ಬಂಧಗಳಾಗಲಿ ನಿಯಮ ನಿಬಂಧನೆಗಳಾಗಲಿ ಇರಲಿಲ್ಲ. ದೇವರೆಂದರೆ ಅವನು ಹುಚ್ಚನಂತಾಗಿ ಆವೇಶಗೊಳ್ಳುತ್ತಿದ್ದ. ಅವನ ಪೂಜಾವಿಧಾನ ಯಾವುದೇ ಶಾಸ್ತ್ರಗಳಿಗೆ ಅನುಸಾರ ಆಗಿರಲಿಲ್ಲ. ಅವನು ನರ್ತಿಸುತ್ತಿದ್ದ; ಹಾಡುತ್ತಿದ್ದ; ಚಪ್ಪಾಳೆ ತಟ್ಟುತ್ತಿದ್ದ. ಸ್ನೇಹಿತರೊಂದಿಗೆ ಹೇಗೋ ಹಾಗೆ, ದೇವರೊಡನೆ ಮಾತನಾಡುತ್ತಿದ್ದ. ಮಗುವನ್ನು ಮುದ್ದಾಡುವಂತೆ ದೇವರನ್ನು ಮುದ್ದಾಡುತ್ತಿದ್ದ. ಪೂಜೆಗೆ ಸಲಕರಣೆಗಳನ್ನು ತರುವಲ್ಲಿ ಆಗುವ ಯಾವುದೇ ವಿಳಂಬಕ್ಕಾಗಿ ಅವನು ದೇವರ ಕ್ಷಮೆ ಕೋರುತ್ತಿದ್ದ. ಸಂಕ್ಷಿಪ್ತವಾಗಿ ಹೇಳುವುದಾದರೆ, ದೇವರ ಹೊರತಾಗಿ ಅವನಿಗೆ ಸ್ವಾರಸ್ಯಕರವಾದುದು ಯಾವುದೂ ಇರಲಿಲ್ಲ. ದೇವಾಲಯದ ಅಧಿಕಾರಿಗಳು ಮತ್ತು ಜನರು ಅವನ ಭಕ್ತಿಯನ್ನು ಕೊಂಡಾಡಿದರು. ಬಸವ ಅವರಿಗೆ ಭಕ್ತಿಗೀತೆಗಳನ್ನು ಕಲಿಸಿದ. ದೇವರೆಂದರೆ ಮೈಮರೆಯುವ ಈ ಭಕ್ತನ ಖ್ಯಾತಿ ಆ ಪ್ರದೇಶಾದ್ಯಂತ ಹಬ್ಬಿತು. ವರ್ಷಕ್ಕೊಮ್ಮೆ ನಡೆಯುವ 'ಕಪಿಲಷಷ್ಠಿ' ಜಾತ್ರೆ ನೋಡಲು ಸುತ್ತಲ ಹಳ್ಳಿಗಳಿಂದ ಜನರು ಗುಂಪು ಗುಂಪಾಗಿ ಕೂಡಲಸಂಗಮಕ್ಕೆ ಬರುತ್ತಿದ್ದರು. ದೇವರ ಸನ್ನಿಧಿಯಲ್ಲಿ ಮೈಮರೆತು ಗಂಟೆಗಟ್ಟಲೆ ಕಾಲ, ಹಾಡುತ್ತ ಕುಣಿಯುತ್ತ ಇರುವ ಬಸವನನ್ನು ಅವರು ನೋಡುತ್ತಿದ್ದರು. ಬಸವ ಶಿವನ ಹಾಗೂ ಶಿವಭಕ್ತರ ಬಗ್ಗೆ ಅವರಿಗೆ ತಿಳಿಸುತ್ತಿದ್ದ. ಜನರ ಗಮನ ಸೆಳೆಯಲು ಅವನು ಪ್ರಾರಂಭಿಸಿದ್ದ. ಹೀಗೆ ಒಬ್ಬ ಧಾರ್ಮಿಕ ಹಾಗೂ ಸಾಮಾಜಿಕ ಮುಖಂಡನಾಗಿ ಬಸವನ ಜೀವನದ ಅಡಿಪಾಯ ಕೂಡಲಸಂಗಮದಲ್ಲಿ ಸ್ಥಾಪಿತವಾಯಿತು.

ಕೂಡಲಸಂಗಮ ಬಸವನ ಆಧ್ಯಾತ್ಮಿಕ ಸಾಧನೆಯ ಸ್ಥಳವಾಗಿ ಪರಿಣಮಿಸಿತು. ಅಲ್ಲಿಯ ಆ ಅನುಕೂಲಕರ ವಾತಾವರಣದಲ್ಲಿಯೇ ಅವನ ವ್ಯಕ್ತಿತ್ವ ಅರಳಿತು. ಪ್ರಾಯಶಃ ಅಲ್ಲಿಯೇ ಬಸವ ತನ್ನ ಆತ್ಮವಿಶ್ವಾಸವನ್ನು ಬೆಳೆಸಿಕೊಂಡ ಮತ್ತು ತನ್ನ ಭವಿಷ್ಯಜೀವನದ ಕನಸುಗಳನ್ನು ಕಟ್ಟಿಕೊಂಡ.

ಅಲ್ಲಿಯೇ ನೆಲೆಸಿ ಕೂಡಲ ಸಂಗಮನ ಸೇವೆಗಾಗಿ ತನ್ನ ಸಂಪೂರ್ಣ ಜೀವನವನ್ನು ಮುಡಿಪಾಗಿಡುವುದು ಅವನ ತತ್‌ಕ್ಷಣದ ಆದರ್ಶವಾಗಿತ್ತು.

ವೀರಶೈವ ಧರ್ಮವೆಂಬ ಹೆಸರಿನ, ಶೈವಧರ್ಮದ ಹೊಸ ಶಾಖೆಯೊಂದನ್ನು ಬಸವಣ್ಣನವರು ಸ್ಥಾಪಿಸಿದರು ಹಾಗೂ ಹೊಸ ಸಾಮಾಜಿಕ ದೃಷ್ಟಿಕೋನವೊಂದನ್ನು ಬೆಳೆಸಿದರು ಎಂದು ಹೇಳಲಾಗಿದೆ. ಬಸವಣ್ಣನವರ ವೀರಶೈವ ಧರ್ಮಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ, ಈ ಬಗ್ಗೆ ಈಗಲೂ ಹಲವು ಬಗೆಯ ವಾದವಿವಾದಗಳು ನಡೆಯುತ್ತಿವೆ. ಬಸವಣ್ಣನವರು ವೀರಶೈವ ಧರ್ಮದ ಪ್ರವರ್ತಕರು ಹಾಗೂ ಈ ಧರ್ಮದ ಇತಿಹಾಸವನ್ನು 12ನೆಯ ಶತಮಾನದ ಮಧ್ಯಭಾಗದಿಂದ ಗುರುತಿಸಬಹುದು ಎಂಬುದು ಒಂದು ಅಭಿಪ್ರಾಯ. ವೀರಶೈವಧರ್ಮ ಇದಕ್ಕಿಂತಲೂ ಪ್ರಾಚೀನ, ಹಾಗೂ ಬಸವಣ್ಣನವರು ಇದಕ್ಕೆ ಪುನಶ್ಚೈತನವನ್ನು ಮಾತ್ರ ನೀಡಿದರು ಎಂಬುದು ಇನ್ನೊಂದು ಅಭಿಪ್ರಾಯ. ಈ ಅಭಿಪ್ರಾಯಗಳ ಗುಣದೋಷಗಳನ್ನು ಕುರಿತ ಚರ್ಚೆಗೆ ತೊಡಗಲು ಇದು ಸ್ಥಳವಲ್ಲ. ಆದರೂ ಸಂಬಂಧಿಸಿದ ಕೆಲವು ವಿಷಯಗಳನ್ನು ಇಲ್ಲಿ ತಿಳಿಸುವುದು ಯೋಗ್ಯ. ಬಸವ-ಪೂರ್ವಯುಗಕ್ಕೆ ಸೇರಿದ ಅನೇಕ ಶಾಸನಗಳು ಅನೇಕ ಸಂಖ್ಯೆಯ ಶೈವಪಂಥಗಳ ಬಗ್ಗೆ ನಮಗೆ ತಿಳಿಸುತ್ತವೆ. ಆದರೆ ಈ ದಾಖಲೆಗಳಲ್ಲಿ ಯಾವುದೂ ವೀರಶೈವ ಧರ್ಮವನ್ನು ಅಥವಾ ಇದನ್ನು ಸೂಚಿಸುವ ಯಾವುದೇ ಪದವನ್ನು ಕುರಿತು ಪ್ರಸ್ತಾಪಿಸುವುದಿಲ್ಲ. ಇದು ನೇತ್ಯಾತ್ಮಕ ಸಾಕ್ಷ್ಯ. ಈ ಧರ್ಮದ ತಾತ್ವಿಕ ಆಧಾರವನ್ನು ಕುರಿತು ಚರ್ಚಿಸುವಂತಹ ಕೆಲವು ಕೃತಿಗಳ-ಉದಾಹರಣೆಗೆ "ಸಿದ್ಧಾಂತ ಶಿಖಾಮಣಿ" - ಪ್ರಾಚೀನತೆಯೇ ಸಂದಿಗ್ಧವಾಗಿದೆ. ಬಸವಣ್ಣನವರು ಮತ್ತು ಅವರ ಸಮಕಾಲೀನರು ಕಾಶ್ಮೀರದ ಶೈವಧರ್ಮಕ್ಕಾಗಲಿ, ಅಥವಾ ತಮಿಳು ನಾಡಿನ ಶೈವಧರ್ಮಕ್ಕಾಗಲಿ, ಸೇರಿದ ಅಧಿಕ ಸಂಖ್ಯೆಯ ಭಕ್ತರ ಬಗ್ಗೆ ಪ್ರಸ್ತಾಪಿಸಿದ್ದಾರೆ. ಪ್ರಾಯಶಃ ಇದಕ್ಕಿರುವ ಒಂದು ಅಪವಾದವೆಂದರೆ ಬಸವಣ್ಣನವರ ಶ್ಲಾಘನೆಗೆ ಪಾತ್ರನಾದ ದೇವರ ದಾಸಿಮಯ್ಯ. ದಾಸಿಮಯ್ಯ ಐತಿಹಾಸಿಕ ವ್ಯಕ್ತಿಯಾಗಿದ್ದ ಹಾಗೂ 11ನೆಯ ಶತಮಾನದ ಮಧ್ಯಕಾಲದಲ್ಲಿ ಜೀವಿಸಿದ್ದ. ಕನ್ನಡ ಭಾಷೆಯಲ್ಲಿರುವ ಅವನ ಕೆಲವು ವಚನಗಳು ಸಿಕ್ಕಿವೆ. ಅವುಗಳಲ್ಲಿ ಮನಸೆಳೆಯುವ ಸಾಹಿತ್ಯಿಕ ಗುಣವಿದೆ. ದಾಸಿಮಯ್ಯ ಶಿವನ ಪರಮಭಕ್ತನಾಗಿದ್ದನೆಂದು ಅವನ ವಚನಗಳಿಂದಲೇ ತಿಳಿದುಬರುತ್ತದೆ. ಆದರೆ ಇಲ್ಲಿಯೂ ಅವನ ಧರ್ಮ ಯಾವುದಾಗಿತ್ತು ಎಂದು ಸ್ಪಷ್ಟವಾಗಿ ಹೆಸರಿಸಲಾಗಿಲ್ಲ. ವೀರಶೈವರಲ್ಲಿ ಒಂದು ವಿಭಾಗದವರು, ಐವರು ಆಚಾರ್ಯರು (ಪಂಚ-ಆಚಾರ್ಯರು) ವೀರಶೈವಧರ್ಮವನ್ನು ಸ್ಥಾಪಿಸಿ ಪ್ರಚಾರ ಮಾಡಿದರೆಂದು ನಂಬುತ್ತಾರೆ. ಇವರ ಕಾಲಗಳ ಬಗ್ಗೆ ಹೆಚ್ಚು ವಾದವಿವಾದಗಳು ನಡೆಯುತ್ತಿವೆ. ಈ ಐವರು ಆಚಾರ್ಯರಲ್ಲಿ ಅಗ್ರಸ್ಥಾನದಲ್ಲಿರುವವನೇ

ರೇವಣಸಿದ್ದ. ಇವನು ಬಸವಣ್ಣನವರ ಹಿರಿಯ ಸಮಕಾಲೀನನೆಂದು ತೋರುತ್ತದೆ. ರೇವಣಸಿದ್ದನನ್ನು ಸಂಪ್ರದಾಯಶೀಲ ಶೈವ ಧರ್ಮದ ಒಂದು ಪಕ್ಷವಾಗಿ ಪ್ರತಿನಿಧಿಸಬಹುದು. ಬಸವಣ್ಣನವರ ಕಾಲದಿಂದೀಚೆಗೆ, ವಿವಿಧ ಶೈವಪಂಗಡಗಳ ಅನೇಕ ಸಮ್ಮಿಶ್ರಣಗಳು ಉಂಟಾಗಿವೆ.

ಈ ಕಾಲದ ವೀರಶೈವರು ಸ್ಥೂಲವಾಗಿ ಎರಡು ಪಂಗಡಗಳಲ್ಲಿ ಸೇರುತ್ತಾರೆ ಎಂದು ಹೇಳಬಹುದು: ರೇವಣಸಿದ್ದನ ಅನುಯಾಯಿಗಳು ಹಾಗೂ ಬಸವಣ್ಣನವರ ಅನುಯಾಯಿಗಳು. ಲಕ್ಷಣಶಾಸ್ತ್ರದ ಅನ್ವಯ, ಇವೆರಡು ಪಂಗಡಗಳವರ ನಡುವೆ ಹೆಚ್ಚಿನ ಗಣನೀಯ ವ್ಯತ್ಯಾಸಗಳೇನೂ ಇಲ್ಲ. ಆದರೆ ಪ್ರತಿಯೊಂದು ಪಂಗಡವೂ ಇನ್ನೊಂದು ಪಂಗಡಕ್ಕಿಂತ ತಾನು ಶ್ರೇಷ್ಠವೆಂದು ಸಾರುತ್ತಿರುವುದರಿಂದಾಗಿ, ಇವೆರಡರ ನಡುವೆ ವಾಗ್ವಾದಗಳೂ, ಅಭಿಪ್ರಾಯ ಭೇದಗಳೂ ಇರುತ್ತಿದ್ದುವು ಮತ್ತು ಅವು ಈಗಲೂ ಮುಂದುವರಿಯುತ್ತಾ ಇವೆ.

ಪ್ರಸ್ತುತ ವಿಷಯಕ್ಕೆ ಸಂಬಂಧಪಡದ ಈ ವಿಚಾರವನ್ನು ಇಲ್ಲಿಗೇ ಬಿಟ್ಟು ವೀರಶೈವ ಧರ್ಮಕ್ಕೆ ಬಸವಣ್ಣನವರು ಹೊಸ ಸ್ವರೂಪ ನೀಡಿದರೆಂಬುದನ್ನು ಗಮನಿಸುವುದು ಇಲ್ಲಿ ಮುಖ್ಯ. ಸ್ವತಃ ದೇವರೇ ಬಸವಣ್ಣನವರನ್ನು ವೀರ ಶೈವನನ್ನಾಗಿ ಮಾಡಿದನೆಂದೂ ಕೂಡಲಸಂಗಮದಲ್ಲಿಯೇ ಅವರಿಗೆ ಲಿಂಗ ವನ್ನು ಕೊಡಲಾಯಿತೆಂದೂ ಕಥೆಗಳು ಹೇಳುತ್ತವೆ. ಬಸವಣ್ಣನವರು ತಾವೇ ಸ್ವತಃ ವೀರಶೈವರಾದರೆಂದೂ ಬೇರಾರೂ ಅವರನ್ನು ವೀರಶೈವ ಧರ್ಮಕ್ಕೆ ಪರಿ ವರ್ತಿಸಲಿಲ್ಲವೆಂದೂ ಇದು ಸೂಚಿಸುವಂತೆ ಕಾಣುತ್ತದೆ. ಬಸವಣ್ಣನವರು ಹೊಸ ಧರ್ಮವನ್ನು ಸ್ಥಾಪಿಸಲಿಲ್ಲ; ಆದರೆ ಹಳೆಯ ಶೈವಧರ್ಮವನ್ನೇ ಮೂಲತಃ ಮಾರ್ಪಾಟುಗೊಳಿಸಿ ಅದಕ್ಕೊಂದು ಹೊಸರೂಪ ನೀಡಿದರು ಎಂದೂ ಇದು ಸೂಚಿಸುವಂತೆ ಕಾಣುತ್ತದೆ. ಬಸವಣ್ಣನವರು ಪ್ರಾರಂಭಿಸಿದ್ದು ಹೊಸ ಧರ್ಮಕ್ಕಿಂತ ಹೆಚ್ಚಾಗಿ ಹೊಸದೊಂದು ಚಳವಳಿಯಾಗಿತ್ತು.

# 4. ಸಮಾಜ ಪುನರ್ಪ್ರವೇಶ

ಕೂಡಲ ಸಂಗಮದಲ್ಲಿ ಪ್ರತ್ಯೇಕವಾಗಿ ಇದ್ದು ವಿರಕ್ತ ಜೀವನ ಸಾಗಿಸಬಹುದೆಂದು ಬಸವಣ್ಣನವರು ಭಾವಿಸಿದ್ದರು. ಆದರೆ ವರ್ಷಗಳುರುಳಿ, ಯುವಕರಾಗುತ್ತಿದ್ದಂತೆ ತಮ್ಮ ಸುತ್ತಮುತ್ತ ಅದೇ ಬಗೆಯ ಭ್ರಷ್ಟ ಸಮಾಜವಿರುವುದನ್ನು ಅವರು ಗಮನಿಸಿದರು. ಕೂಡಲ ಸಂಗಮ ಯಾವುದೇ ರೀತಿಯಲ್ಲಿಯೂ ಬಾಗೇವಾಡಿಗಿಂತ ಭಿನ್ನವಾಗಿರಲಿಲ್ಲ. ಇಂಥ ಭ್ರಷ್ಟತೆಯನ್ನು ಸಹಿಸುವಂತಹ ಸ್ವಭಾವ ಬಸವಣ್ಣನವರದ್ದಾಗಿರಲಿಲ್ಲ. ಎಂಟರಿಂದ ಹದಿನಾರು ವರ್ಷಗಳ ನಡುವಣ ವಯಸ್ಸಿನಲ್ಲಿ ಅವರು ಆಗಲೇ ಒಂದು ಸಲ ತಮ್ಮದೇ ಆದ ರೀತಿಯಲ್ಲಿ ಅಸಮಾಧಾನವನ್ನು ವ್ಯಕ್ತಪಡಿಸಿದ್ದರು. ಅಜ್ಞಾನ ಮತ್ತು ಶೋಷಣೆಗಳ ವಿರುದ್ಧ ಹೋರಾದಬೇಕೆಂಬ ಪ್ರೇರಣೆ ಹಾಗೂ ಹೊಸ ವ್ಯವಸ್ಥೆಯೊಂದನ್ನು ಜಾರಿಗೆ ತರಬೇಕೆಂಬ ಬಯಕೆಗಳು ಅವರಲ್ಲಿ ಈಗ ಬಲವಾಗಿ ಮೂಡಿದುವು. ಕೂದಲ ಸಂಗಮದಲ್ಲಿ ಬಸವಣ್ಣನವರು ಅಸುಖಿಗಳಾಗಿದ್ದರೆಂದು ಇದರ ಅರ್ಥವಲ್ಲ. ಇದಕ್ಕೆ ಬದಲಾಗಿ ಒಬ್ಬ ವ್ಯಕ್ತಿಯಾಗಿ ತಾನು ಆಧ್ಯಾತ್ಮಿಕವಾಗಿ ಹೆಚ್ಚು ಎತ್ತರ ಏರಬಲ್ಲೆ ಹಾಗೂ ಮೋಕ್ಷ ಸಂಪಾದಿಸಬಲ್ಲೆ ಎಂದು ಅವರಿಗೆ ಸಂಪೂರ್ಣ ಮನವರಿಕೆಯಾಗಿತ್ತು. ದೇವಾಲಯದ ಅಧಿಕಾರಿಗಳು ಕೂಡ ಅವರನ್ನು ಗೌರವಿಸುತ್ತಿದ್ದರು. ಇದೆಲ್ಲ ಒಂದು ಆಕರ್ಷಣೆಯಷ್ಟೇ ಆಗಿತ್ತು. ಹೀಗಾಗಿ ಅಲ್ಲಿಂದ ದೂರ ಸಾಗಿ ವಿಶಾಲವಾದ ಜಗತ್ತನ್ನು ಸೇರಿ ಮಾನವ ಜನಾಂಗದ ಹಿತಕ್ಕಾಗಿ ಏನಾದರೂ ಕೆಲಸ ಮಾಡಬೇಕೆಂದು ಅವರ ಒಳಮನಸ್ಸು ಅವರನ್ನು ಒತ್ತಾಯಿಸತೊಡಗಿತು. ಅಲ್ಲದೆ ದೇವಾಲಯದ ರಕ್ಷಣೆಯಲ್ಲಿರುವುದರಿಂದಾಗಿ ತಾವು ಆಶ್ರಿತರೆಂದು ಅವರಿಗೆ ಅನಿಸಿತ್ತು. ಉದ್ಯೋಗವೊಂದನ್ನು ಹಿಡಿದು ಜೀವನ ನಿರ್ವಹಣೆಗಾಗಿ ಸಂಪಾದಿಸಬೇಕೆಂದು ಅವರು ಆಲೋಚಿಸತೊಡಗಿದರು. ತಮ್ಮ ಕನಸಿನ ಸಮಾಜವನ್ನು ರೂಪಿಸಬಲ್ಲಂತಹ ಸಮರ್ಪಣ ಮನೋಭಾವದ ಕಾರ್ಯಕರ್ತರ ತಂಡವೊಂದನ್ನು ಕಟ್ಟುವಲ್ಲಿ ಇದು ಸಹಾಯಕ ಆದೀತೆಂದು ಅವರು ಭಾವಿಸಿದರು.

ಆಗ ರಾಜಕೀಯ ವಲಯಗಳಲ್ಲಿ ಹೆಚ್ಚು ಕೇಳಿಬರುತ್ತಿದ್ದ ಹೆಸರು ಬಿಜ್ಜಳ ರಾಜನದಾಗಿತ್ತು. ಅವನ ರಾಜಧಾನಿಯಾದ ಮಂಗಳವೇಢೆಗೆ ಹೋಗಲು ಬಸವಣ್ಣನವರು ನಿರ್ಧರಿಸಿದರು. ಆದರೆ ಕೂಡಲ ಸಂಗಮವನ್ನು

ಬಿಡುವುದು ಅವರಿಗೆ ತುಂಬ ಕಷ್ಟದ ವಿಷಯವಾಗಿತ್ತು. ಅವರ ಇಷ್ಟ ದೈವವಾದ ಕೂಡಲ ಸಂಗಮನ ಆ ಸ್ಥಳ ಅವರಿಗೆ ತುಂಬ ಪ್ರಿಯವಾಗಿತ್ತು. ಆದರೆ ಕೂಡಲ ಸಂಗಮ ದೇವನೇ ಸ್ವತಃ ಅವರ ಸ್ವಪ್ನಗಳಲ್ಲಿ ಕಾಣಿಸಿ ಕೊಂಡು, ಸದಾ ಅವರೊಂದಿಗಿದ್ದು ಸಹಾಯ ಮಾಡುವುದಾಗಿ ಮತ್ತೆ ಮತ್ತೆ ಭರವಸೆ ನೀಡಿದ ನಂತರ, ಅವರು ಕೂಡಲ ಸಂಗಮವನ್ನು ಬಿಟ್ಟು ಹೊರಡುವ ನಿರ್ಧಾರಕ್ಕೆ ಬಂದರು. ಬಸವಣ್ಣನವರಿಗೆ ಒಳ್ಳೆಯ ಗಣಿತ ಜ್ಞಾನವಿತ್ತು. ಆದ್ದರಿಂದ ಬಿಜ್ಜಳನಲ್ಲಿ ತಮಗೆ ಕರಣಿಕ ವೃತ್ತಿ ದೊರೆಯ ಬಹುದೆಂದು ಅವರು ಭಾವಿಸಿದರು.

ಬಿಜ್ಜಳನು ಯಾರು? ಮತ್ತು ಕಲ್ಯಾಣದ ಚಾಲುಕ್ಯ ರಾಜರ ಅಧೀನದಲ್ಲಿ ಸಾಮಂತನಾಗಿದ್ದ ಅವನು ರಾಜಕೀಯ ಪ್ರಾಮುಖ್ಯತೆಯನ್ನು ಹೇಗೆ ಗಳಿಸಿದನು? ಎಂಬ ವಿಷಯಗಳ ಬಗ್ಗೆ ನಾವಿಲ್ಲಿ ಪ್ರಸ್ತಾಪಿಸಬೇಕು. ಬಸವಣ್ಣ ನವರು ಮತ್ತು ಬಿಜ್ಜಳ - ಇವರ ಜೀವನಗಳು ಒಂದರೊಡನೊಂದು ಹೆಣೆದುಕೊಂಡಿದ್ದವು ಮತ್ತು ಪರಸ್ಪರ ಗಾಢವಾದ ಪರಿಣಾಮ ಬೀರಿದ್ದವು.

ಬಾದಾಮಿ ಚಾಲುಕ್ಯರ (ಸು. ಕ್ರಿ.ಶ. 500ರಿಂದ 750) ಅನಂತರ ರಾಷ್ಟ್ರಕೂಟ ಅರಸರ ಆಳ್ವಿಕೆ ಪ್ರಾರಂಭವಾಯಿತು. ರಾಷ್ಟ್ರಕೂಟರ ಆಧಿಪತ್ಯ ದಕ್ಷಿಣದಿಂದ ಕರ್ನಾಟಕದವರೆಗೂ ವಿಸ್ತರಿಸಿತ್ತು. ಮೂರನೆಯ ಕೃಷ್ಣ ರಾಷ್ಟ್ರ ಕೂಟ ರಾಜವಂಶದಲ್ಲಿ ಕೊನೆಯವನೂ ಮತ್ತು ಪ್ರಾಯಶಃ ಈ ವಂಶದ ಪ್ರಖ್ಯಾತ ಮಹಾರಾಜರಲ್ಲಿ ಒಬ್ಬನೂ ಆಗಿದ್ದ. ಇವನ ಕೈ ಕೆಳಗೆ ಆಹವಮಲ್ಲ ತೈಲ ಅಥವಾ ಎರಡನೆಯ ತೈಲ ಸೇವೆ ಸಲ್ಲಿಸಿದ್ದ. ಇವನು ತರ್ದವಾಡಿ ನಾಡನ್ನು ಆಳಿದ್ದ (ವಿಜಾಪುರ ಜಿಲ್ಲೆಯಲ್ಲಿರುವ ಈಗಿನ ಇಂಡಿ, ಸಿಂಧ್ಗಿ ಹಾಗೂ ಬಾಗೇವಾಡಿ ತಾಲ್ಲೂಕುಗಳು). ತೈಲನು ಬಾದಾಮಿ ಚಾಲುಕ್ಯರ ಕುಟುಂಬಕ್ಕೆ ಸೇರಿದ್ದು ತುಂಬ ಮಹತ್ವಾಕಾಂಕ್ಷಿಯಾದ ರಾಜನಾಗಿದ್ದ. ಕರ್ನಾಟಕದ ಇತಿಹಾಸದಲ್ಲಿ ಉಜ್ವಲ ಪಾತ್ರವನ್ನು ನಿರ್ವಹಿಸಿದಂತಹ ತನ್ನ ಪೂರ್ವಜರ ಬಗ್ಗೆ ಅವನಿಗೆ ಅಭಿಮಾನವಿದ್ದುದು ಸಹಜವೇ ಆಗಿತ್ತು. ತನ್ನ ಸ್ವಾತಂತ್ರ್ಯವನ್ನು ಪುನಃ ಗಳಿಸಿಕೊಳ್ಳುವ ಅವಕಾಶವನ್ನು ಅವನು ಕಾಯುತ್ತಾ ಇದ್ದ. ಕೃಷ್ಣನ ತಮ್ಮನಾದ ಖೊಟ್ಟಿಗ ಸಿಂಹಾಸನವನ್ನೇರಿದಾಗ ಈ ಸದವಕಾಶ ಒದಗಿ ಬಂತು. ಖೊಟ್ಟಿಗ ಹಾಗೂ ಅವನ ಉತ್ತರಾಧಿಕಾರಿಯಾದ ಕರ್ಕ ದುರ್ಬಲ ಅರಸರಾಗಿದ್ದರು. ಕ್ರಿ.ಶ. 973 ರಲ್ಲಿ ಕರ್ಕನನ್ನು ಸೋಲಿಸಿದ ತೈಲ ತಾನೇ ಚಕ್ರವರ್ತಿಯೆಂದು ಘೋಷಿಸಿಕೊಂಡ. ಹೀಗೆ ಇನ್ನೂರು ವರ್ಷಗಳಿ ಗಿಂತಲೂ ಹೆಚ್ಚು ಅವಧಿಯ ತರುವಾಯ ಬಾದಾಮಿ ಚಾಲುಕ್ಯರ ಆಳ್ವಿಕೆ ಪುನಃ ಸ್ಥಾಪಿತವಾಯಿತು.

ತೈಲ ಮಾನ್ಯಖೇಟದಿಂದ (ಈಗಿನ ಗುಲ್ಬರ್ಗ ಜಿಲ್ಲೆಯ ಮಾಳ್ಖೇಡ) ಆಳಿದ. ಇವನು ತನ್ನ ಸಾಮ್ರಾಜ್ಯವನ್ನು ಎಷ್ಟು ಪ್ರಬಲಗೊಳಿಸಿದನೆಂದರೆ ಮತ್ತೆ

250 ವರ್ಷಗಳವರೆಗೆ ಅದು ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿತು. ಇವನೂ ಇವನ ಉತ್ತರಾಧಿಕಾರಿಗಳೂ ವಿದ್ಯೆಗೆ ತುಂಬ ರಾಜಾಶ್ರಯ ನೀಡಿದ್ದರು. ಉದಾಹರಣೆಗೆ, ತೈಲ ಹಾಗೂ ಅವನ ಮಗನೂ ಉತ್ತರಾಧಿಕಾರಿಯೂ ಆಗಿದ್ದ ಇರಿವ ಬೆಡಂಗ ಸತ್ಯಾಶ್ರಯ - ಇವರ ಕಾಲದಲ್ಲಿಯೇ ಕನ್ನಡದ ರತ್ನತ್ರಯ ರಲ್ಲಿ ಒಬ್ಬರೆನಿಸಿದ ರನ್ನ ತನ್ನ ಮಹಾಕಾವ್ಯಗಳನ್ನು ರಚಿಸಿದ. ಕ್ರಿ.ಶ. 1048ರಲ್ಲಿ ಒಂದನೆಯ ಸೋಮೇಶ್ವರನು ತನ್ನ ರಾಜಧಾನಿಯನ್ನು ಮಾನ್ಯ ಖೇಟದಿಂದ ಕಲ್ಯಾಣಕ್ಕೆ (ಬೀದರ್ ಜಿಲ್ಲೆ) ವರ್ಗಾಯಿಸಿದ. ಈ ನಗರ ಚಾಲುಕ್ಯ ಸಾಮ್ರಾಜ್ಯದ ಕೊನೆಯ ದಿನದವರೆಗೂ ರಾಜಧಾನಿಯಾಗಿ ಉಳಿ ಯಿತು. ಹೀಗೆ ಚಾಲುಕ್ಯರು ಕಲ್ಯಾಣದ ಚಾಲುಕ್ಯರೆಂದು ಖ್ಯಾತರಾದರು.

ಆರನೆಯ ವಿಕ್ರಮಾದಿತ್ಯನ (ಕ್ರಿ.ಶ. 1076 ) ಕಾಲದಲ್ಲಿ ಚಾಲುಕ್ಯ ಸಾಮ್ರಾಜ್ಯದ ಕೀರ್ತಿ ತನ್ನ ಉಚ್ಛ್ರಾಯ ಸ್ಥಿತಿಯನ್ನು ತಲುಪಿತು. ತೈಲನಿಂದ ವಿಕ್ರಮಾದಿತ್ಯನವರೆಗೆ ಅದು ಒಂದೇ ಸಮನೆ ಅಭಿವೃದ್ಧಿ ಹೊಂದಿತು. ಸಾಮ್ರಾಜ್ಯದ ಗಡಿಗಳು ವಿಸ್ತಾರಗೊಂಡುವು. ಸುಂದರವಾದ ಅನೇಕ ದೇವಾಲಯಗಳ ನಿರ್ಮಾಣವಾಯಿತು. ಸಾಹಿತಿಗಳನ್ನು ಸನ್ಮಾನಿಸಲಾಯಿತು. 'ಕಲ್ಯಾಣದಂತಹ ನಗರ ಹಿಂದೆಂದೂ ಇರಲಿಲ್ಲ. ಹಾಗೂ ಮುಂದೆಂದೂ ಇರುವುದಿಲ್ಲ' ಎಂದು ವಿಜ್ಞಾನೇಶ್ವರ ತನ್ನ 'ಮಿತಾಕ್ಷರಾ' ವ್ಯಾಖ್ಯಾನದಲ್ಲಿ ಉದ್ಗರಿಸಿದ್ದಾನೆ.

ಹಾಗಿದ್ದರೂ ವಿಕ್ರಮಾದಿತ್ಯನ ಅನಂತರ ದುರ್ಬಲರೂ ಅಸಮರ್ಥರೂ ಕಡಿಮೆ ಕಲ್ಪನಾಶಕ್ತಿ ಹಾಗೂ ಪ್ರೇರಣೆಗಳನ್ನು ಹೊಂದಿದವರೂ ಆದ ರಾಜರು ಒಬ್ಬರ ಅನಂತರ ಇನ್ನೊಬ್ಬರಂತೆ ಸಿಂಹಾಸನವನ್ನೇರಿದುದು ವಿಷಾದದ ಕಥೆಯಾಗಿದೆ. ಹನ್ನೆರಡನೆಯ ಶತಮಾನದ ಮಧ್ಯಭಾಗದಲ್ಲಿ ಮೂರನೆಯ ತೈಲ ಸಿಂಹಾಸನಚ್ಯುತನಾದ ಹಾಗೂ ಪ್ರಾಯಶಃ ಬಿಜ್ಜಳನಿಂದ ಹತನಾದ. ಬಿಜ್ಜಳನ ದುರಾಕ್ರಮಣವೆಂಬುದು ಸ್ವಾರಸ್ಯಕರವಾದ ಆದರೆ ದುಃಖಕರವಾದ ಇನ್ನೊಂದು ಕಥೆಯಾಗಿದೆ. ಒಮ್ಮೆ ಅವನತಿ ಹೊಂದಿ, ಅನಂತರ ಮೊತ್ತ ಮೊದಲು ಸಿಕ್ಕ ಅವಕಾಶದ ಉಪಯೋಗವನ್ನೇ ಪಡೆದು ಸ್ವತಃ ಪುನಸ್ಥಾಪನೆ ಗೊಂಡ ಪ್ರಬಲ ರಾಜಮನೆತನವೊಂದರ ಹಳೆಯ ಕಥೆಯೂ ಆಗಿರುತ್ತದೆ.

ಬಿಜ್ಜಳ ಕಲಚುರಿ ಕುಟುಂಬಕ್ಕೆ ಸೇರಿದ್ದ. ಕಲಚುರಿಗಳು ಮೂಲತಃ ಮಧ್ಯ ಪ್ರದೇಶದ ಬುಂದೇಲಖಂಡಕ್ಕೆ ಸೇರಿದವರಾಗಿದ್ದರು. ಶಿವನ ಗಾಢ ಭಕ್ತರಾಗಿದ್ದುದರಿಂದ ಶಾಸನಗಳಲ್ಲಿ ಇವರನ್ನು 'ಪರಮಮಾಹೇಶ್ವರ''ರೆಂದು ಕರೆಯಲಾಗಿದೆ. ಇವರ ರಾಜಲಾಂಛನದಲ್ಲಿ 'ನಂದಿ'ಯ ಚಿತ್ರವಿತ್ತು. ಕಲಚುರಿಗಳದು ಪ್ರಬಲ ರಾಜಮನೆತನವಾಗಿದ್ದರೂ ಇವರು ರಾಜ್ಯಚ್ಯುತರಾಗಿ ಭಾರತದ ವಿವಿಧ ಪ್ರದೇಶಗಳಿಗೆ ಹೋಗಿ ನೆಲಸಬೇಕಾಗಿ ಬಂತು. ಮೇಲೆ ಹೇಳಲಾದ ರಾಜವಂಶದ ಒಂದು ಶಾಖೆಯವರು ದಕ್ಷಿಣಭಾರತಕ್ಕೆ ಬಂದು

ಮಂಗಳವೇಡದಲ್ಲಿ (ಈಗಿನ ಮಹಾರಾಷ್ಟ್ರದ ಶೋಲಾಪುರ ಜಿಲ್ಲೆಯ ಮಂಗಲವೇಢೆ) ಚಾಲುಕ್ಯರ ಭೃತ್ಯರಾಗಿ ನೆಲಸಿದರು. ಇವರೇ ಕಲಚುರಿಗಳ ಕುಟುಂಬದ ಕರ್ನಾಟಕ ಶಾಖೆಯ ಪ್ರವರ್ತಕರಾಗಿರುತ್ತಾರೆ.

ಕಲಚುರಿಗಳ ಇತಿಹಾಸ ಉಚಿತನೊಂದಿಗೆ (ಕ್ರಿ.ಶ.925) ಪ್ರಾರಂಭವಾಗುತ್ತದೆ. ಇವನ ಉತ್ತರಾಧಿಕಾರಿಗಳಾಗಿ ಬಂದ ರಾಜರುಗಳ ಹೆಸರುಗಳನ್ನು ಬಿಟ್ಟರೆ ಇವರ ವಿಚಾರವಾಗಿ ಹೆಚ್ಚು ವಿಷಯಗಳೇನೂ ತಿಳಿದಿಲ್ಲ. ವಾಸ್ತವ ವಿಚಾರವೇನೆಂದರೆ ಭಾರತದಲ್ಲಿ ಈ ವಂಶ ತನ್ನ ಅಸ್ತಿತ್ವವನ್ನು ಪ್ರಚುರಪಡಿಸಿದ್ದು ಜೋಗಮನ (ಕ್ರಿ.ಶ. 1110) ಆಳ್ವಿಕೆಯಲ್ಲಿ ಮಾತ್ರ. ಕಲ್ಯಾಣದ ಚಾಲುಕ್ಯರ ಭೃತ್ಯನಾದ ಇವನು ಅನೇಕ ಯುದ್ಧಗಳಲ್ಲಿ ಹೋರಾಡಿ ಜಯಗಳಿಸಿದ, ಇವನ ಮಗಳಾದ ಸಾವಳದೇವಿಯನ್ನು ಖ್ಯಾತನಾದ ಆರನೆಯ ವಿಕ್ರಮಾದಿತ್ಯ ಮದುವೆಯಾಗಿದ್ದ. ಹೀಗೆ ಚಾಲುಕ್ಯ ಸಾಮ್ರಾಜ್ಯದಲ್ಲಿ ಜೋಗಮ ಒಬ್ಬ ಪ್ರಭಾವಿವ್ಯಕ್ತಿಯಾಗಿದ್ದನೆಂದು ತಿಳಿಯಬಹುದು. ಚಾಲುಕ್ಯರಲ್ಲಿ ಈ ವಿಕ್ರಮಾದಿತ್ಯನೇ ಅತ್ಯಂತ ಪ್ರಬಲ ರಾಜನಾಗಿದ್ದನೆಂದು ಈ ಹಿಂದೆಯೇ ನೋಡಿದ್ದೇವೆ. ಜೋಗಮನ ಮಗನಾದ ಪೆರ್ಮಾಡಿ (ಕ್ರಿ.ಶ.1118-40) ತಂದೆಯ ಉತ್ತರಾಧಿಕಾರಿಯಾದ; ವಿಕ್ರಮಾದಿತ್ಯನ ಇನ್ನೊಬ್ಬಳು ರಾಣಿಯ ಮಗಳಾದ ಚಂದಲದೇವಿಯನ್ನು ಮದುವೆಯಾದ. ಹೀಗೆ ಪೆರ್ಮಾಡಿ ಚಾಲುಕ್ಯರೊಂದಿಗೆ ನಿಕಟ ಸಂಬಂಧ ಹೊಂದಿದ್ದ ಮತ್ತು ನಿಜವಾಗಿ ವಿಕ್ರಮಾದಿತ್ಯನ ಅಳಿಯನೇ ಆಗಿದ್ದ; ಅಲ್ಲದೆ ವಿಕ್ರಮಾದಿತ್ಯನ ಅನಂತರ ಚಕ್ರವರ್ತಿಯಾಗಿ ಉತ್ತರಾಧಿಕಾರವನ್ನು ಹೊಂದಿದ್ದ ಮೂರನೆಯ ಸೋಮೇಶ್ವರನ ಸೋದರಮಾವನೂ ಆಗಿದ್ದ. ಸೋಮೇಶ್ವರ ದುರ್ಬಲರಾಜ. ಇವನ ದೌರ್ಬಲ್ಯವನ್ನು ಸ್ವಪ್ರಯೋಜನಕ್ಕಾಗಿ ಬಳಸಿಕೊಳ್ಳುವ ಹಾಗೂ ಸ್ವತಂತ್ರನಾಗುವ ಪ್ರಯತ್ನಗಳನ್ನು ಪೆರ್ಮಾಡಿ ಮಾಡಿದ್ದನೆಂದು ನಂಬಲು ಆಧಾರಗಳಿವೆ.

ಈ ಪೆರ್ಮಾಡಿಯ ಮಗನೇ ಬಿಜ್ಜಳ. ಇವನು ಸುಮಾರು ಕ್ರಿ.ಶ. 1140 ರಲ್ಲಿ ತಂದೆಯ ಉತ್ತರಾಧಿಕಾರಿಯಾದ. ಎರಡನೆಯ ಜಗದೇಕ ಮಲ್ಲನೆಂಬವನೂ ಸೋಮೇಶ್ವರನ ಉತ್ತರಾಧಿಕಾರಿಯಾಗಿ ಆಗಷ್ಟೇ ಚಕ್ರವರ್ತಿಯಾಗಿದ್ದ. ಇವನೂ ಬಿಜ್ಜಳನೂ ಸಮೀಪ ಸಂಬಂಧಿಗಳೂ ಸಮ ವಯಸ್ಸಿನವರೂ ಆಗಿದ್ದರು. ಜಗದೇಕಮಲ್ಲ ಮೊದಲು ಸತ್ತ. ಅವನ ತಮ್ಮನಾದ ಮೂರನೆಯ ತೈಲ ಅನಂತರ ಸಿಂಹಾಸನವನ್ನೇರಿದ. ಮೂರನೆಯ ತೈಲ ತುಂಬ ಅಸಮರ್ಥನಾಗಿದ್ದ; ಇವನು ಆಡಳಿತದಲ್ಲಿ ಹೆಚ್ಚು ಸಮರ್ಥನಾಗಿರಲಿಲ್ಲ. ಅಥವಾ ಇವನಿಗೆ ಆಡಳಿತ ಸಾಮರ್ಥ್ಯವೇ ಇರಲಿಲ್ಲವೆಂದರೂ ತಪ್ಪಾಗದು. ಬಿಜ್ಜಳ ತನ್ನ ತಂದೆಯ ಕನಸುಗಳೊಂದಿಗೇ ಬೆಳೆದ. ಅವನು ಸ್ವತಂತ್ರನಾಗಬಯಸಿದ. ಸಾಧ್ಯವಾದ ಪಕ್ಷದಲ್ಲಿ ತನ್ನ ಪೂರ್ವಜರು ಕಳೆದುಕೊಂಡಿದ್ದ ಖ್ಯಾತಿಯನ್ನು ಮತ್ತೆ ಗಳಿಸಬೇಕೆಂಬುದು ಬಿಜ್ಜಳನ ಅಪೇಕ್ಷೆ

ಆಗಿತ್ತು. ಸಿಂಹಾಸನವನ್ನೇರಿದ ದುರ್ಬಲನಾದ ತೈಲನನ್ನು ನೋಡಿದಾಗ ಅವನ ಮಹತ್ವಾಕಾಂಕ್ಷೆಗೆ ಪ್ರಚೋದನೆ ದೊರೆಯಿತು. ಬಿಜ್ಜಳ ಶೂರನೂ ಚತುರನೂ ಆಗಿದ್ದನಲ್ಲದೆ, ಅವಕಾಶ ತಾನಾಗಿ ಒದಗಿ ಬರುವುದೆಂದೂ ಅದನ್ನು ಬಿಟ್ಟು ಬಿಡಬಾರದೆಂದೂ ನಂಬಿದ್ದ. ಅವನು ಅನೇಕ ಸಾಮಂತ ರಾಜರ ವಿಶ್ವಾಸ ವನ್ನು ಗಳಿಸಿಕೊಂಡು ಸಿಂಹಾಸನವನ್ನು ಅತಿಕ್ರಮಿಸುವ ಸಂಚು ಹೂಡಿದ. ಈ ಸಾಮಂತ ರಾಜರಲ್ಲಿ ಅತ್ಯಂತ ಪ್ರಮುಖನಾದವನೆ ಕಸಪಯ್ಯ. ಇವನು ಬನವಾಸಿ ಪ್ರಾಂತವನ್ನು ಆಳುತ್ತಿದ್ದ. ತೈಲನಿಗೆ ಬಿಜ್ಜಳನಲ್ಲಿ ಸಂಪೂರ್ಣ ಭರವಸೆ ಯಿತ್ತು. ಆದ್ದರಿಂದ ರಾಜ್ಯಾಡಳಿತದಲ್ಲಿ ಇವನು ಬಿಜ್ಜಳನನ್ನೇ ಸಂಪೂರ್ಣ ವಾಗಿ ಅವಲಂಬಿಸಿದ್ದ. ಬಿಜ್ಜಳ ಈ ಸನ್ನಿವೇಶವನ್ನು ಸಂಪೂರ್ಣವಾಗಿ ಬಳಸಿ ಕೊಂಡ. ಇತರರಿಗೆ ಅಧೀನವಾಗಿರುವುದನ್ನು ಸೂಚಿಸುವ 'ಮಹಾ ಮಂಡಲೇಶ್ವರ'ದಂತಹ ಬಿರುದುಗಳನ್ನು ತೊರೆದು 'ಭುಜ ಬಲಿ ಚಕ್ರವರ್ತಿ', ಮತ್ತು 'ತ್ರಿಭುವನ ಮಲ್ಲ' - ಇವುಗಳಂತಹ ಸಾಮ್ರಾಟ ಪದವಿಗಳನ್ನು ಧರಿಸಿದ; ತನ್ನನ್ನು 'ಮಹಾರಾಜಾಧಿರಾಜ'ನೆಂದೂ ಕರೆದುಕೊಂಡ. ನಿರಂಕುಶ ಪ್ರಭುವಾಗುವ ಇವನ ಈ ಪ್ರಯತ್ನಗಳು ಕ್ರಿ.ಶ. 1156 ರಷ್ಟು ಹಿಂದೆಯೇ ಪ್ರಾರಂಭವಾಗಿದ್ದುವು. ಸುಮಾರು ಕ್ರಿ.ಶ. 1162 ರಲ್ಲಿ ಬಿಜ್ಜಳನ ಪ್ರಯತ್ನಕ್ಕೆ ಯಶಸ್ಸು ಲಭಿಸಿತು. ತೈಲನನ್ನು ಸಿಂಹಾಸನದಿಂದ ಚ್ಯುತಿಗೊಳಿಸಿ ತಾನೇ ಸಾಮ್ರಾಟನೆಂದು ಅಧಿಕೃತವಾಗಿ ಘೋಷಿಸಿಕೊಂಡ. ತೈಲ ಬಿಜ್ಜಳನನ್ನು ಎದುರಿಸುವ ಪ್ರಯತ್ನವನ್ನು ಮಾಡಿರಬೇಕು. ಆದರೆ ಅವನನ್ನು ಸುಲಭವಾಗಿ ಸೋಲಿಸಿ ಹತ್ಯೆ ಮಾಡಲು ಬಿಜ್ಜಳನಿಗೆ ಸಾಧ್ಯವಾಯಿತು ಎಂದು ನಾವು ಭಾವಿಸಬಹುದು.

ಇನ್ನು ನಾವು ಬಸವಣ್ಣನವರ ವಿಷಯಕ್ಕೆ ಬರೋಣ. ಕರಣಿಕನ ಉದ್ಯೋಗ ಅರಸಿಕೊಂಡು ಅವರು ಕೂಡಲ ಸಂಗಮವನ್ನು ತೊರೆದು ಮಂಗಳವೇಢಕ್ಕೆ ಬಂದರೆಂದು ನಾವು ಹಿಂದಿನ ಅಧ್ಯಾಯಗಳಲ್ಲಿ ನೋಡಿದ್ದೇವೆ. ಆ ವೇಳೆಗೆ ಬಿಜ್ಜಳ ಇನ್ನೂ ಸಿಂಹಾಸನವನ್ನು ದುರಾಕ್ರಮಿಸಿರಲಿಲ್ಲ. ಆಗ ಅವನು ಚಾಲುಕ್ಯರ ಅಧೀನದಲ್ಲಿ ಸಾಮಂತನಾಗಿಯೇ ಇದ್ದು ಮಂಗಳವೇಢದಿಂದ ಆಳುತ್ತಿದ್ದ. ಇಲ್ಲಿಂದ ಮುಂದಿನ ಕಥೆ ಹರಿಹರನ ಕೃತಿಯಿಂದ ತಿಳಿದು ಬರುತ್ತದೆ. ಮಂಗಳವೇಢದಲ್ಲಿ ಬಸವಣ್ಣನವರು ಹೇಗೆ ನೌಕರಿ ಗಳಿಸಿದರು ಎಂಬುದನ್ನು ಹರಿಹರ ನಿರೂಪಿಸಿದ್ದಾನೆ: ಬಸವಣ್ಣನವರು ನೇರವಾಗಿ .ರಾಜನ ಕೋಶಾಗಾರಕ್ಕೆ ಹೋದರು ಮತ್ತು ಅಲ್ಲಿ ತಮ್ಮ ತಮ್ಮ ಕೆಲಸಗಳಲ್ಲಿ ನಿರತ ರಾಗಿದ್ದ ಅಧಿಕಾರಿಗಳನ್ನು ನೋಡುತ್ತ ನಿಂತರು. ಆಗ ಕೋಶಾಗಾರದ ಮುಖ್ಯಾಧಿಕಾರಿಯಾಗಿದ್ದ ಸಿದ್ಧದಂಡಾಧಿಪ ಕಛೇರಿಗೆ ಬಂದು ಲೆಕ್ಕ ಪತ್ರ ಗಳನ್ನು ನೋಡಬಯಸಿದ. ಕರಣಿಕರು ಲೆಕ್ಕದಲ್ಲಿ ಒಂದು ತಪ್ಪು ಮಾಡಿ ದ್ದರು. ಈ ತಪ್ಪಿನಿಂದಾಗಿ ಕೋಶಾಧ್ಯಕ್ಷರಿಗೆ ಐದು ದಶಲಕ್ಷಗಳಷ್ಟು ನಷ್ಟ

ಆಗುವ ಸಂಭವವಿತ್ತು. ಏನೊಂದೂ ಉದ್ದೇಶವಿಲ್ಲದೆಯೇ ಸುಮ್ಮನೆ ಲೆಕ್ಕ ಪತ್ರಗಳನ್ನು ಗಮನಿಸುತ್ತ ನಿಂತಿದ್ದ ಬಸವಣ್ಣನವರ ಲಕ್ಷ್ಯ ಕೂಡಲೇ ಆ ತಪ್ಪಿನತ್ತ ಹೊರಟಿತು. ಸಿದ್ಧದಂಡನಾಥನಿಗೆ ತುಂಬ ಸಂತೋಷವುಂಟಾಯಿತು. ಅವನು ಕೂಡಲೇ ಬಸವಣ್ಣನವರನ್ನು ಗಣಕರಾಗಿ ನೇಮಿಸಿಕೊಂಡ. ಮಾತು ಕಥೆಯ ಅನಂತರ ಬಸವಣ್ಣನವರು ತನ್ನ ದೂರದ ಸಂಬಂಧಿ ಎಂದು ತಿಳಿದು ಅವನಿಗೆ ಆಶ್ಚರ್ಯವಾಯಿತು. ತನ್ನೊಂದಿಗೆ ಇರುವಂತೆ ಅವನು ಬಸವಣ್ಣನವರನ್ನು ಕೇಳಿಕೊಂಡ.

ಮೇಲೆ ನಿರೂಪಿಸಲಾದ ರೀತಿಯಲ್ಲಿಯೇ ಘಟನೆಗಳು ಸಂಭವಿಸಿಸದೆ ಇದ್ದಿರಲೂ ಸಾಧ್ಯ. ಆದರೆ ಬಸವಣ್ಣನವರು ಬಿಜ್ಜಳನಲ್ಲಿ ನೌಕರಿ ಸಂಪಾದಿಸಲು ಹೇಗೆ ಶಕ್ತರಾದರು ಎಂಬುದನ್ನು ಖಂಡಿತವಾಗಿಯೂ ಈ ನಿರೂಪಣೆ ತಿಳಿಸುತ್ತದೆ. ಸಿದ್ಧದಂಡಾಧಿಪನು ತಮ್ಮ ಸಂಬಂಧಿಯೆಂಬುದನ್ನು ಬಸವಣ್ಣನವರು ಮೊದಲೇ ತಿಳಿದಿರುವ ಸಾಧ್ಯತೆಯಿತ್ತೆಂಬುದನ್ನು ನಾವು ತಳ್ಳಿ ಹಾಕುವಂತಿಲ್ಲ. ಅಲ್ಲದೆ ಬಸವಣ್ಣನವರನ್ನು ಮತ್ತೆ ಮಂಗಳವೇಡಕ್ಕೆ ಹೋಗುವಂತೆ ಪ್ರೇರೇಪಿಸಿದ ಕಾರಣಗಳಲ್ಲಿ ಇದೂ ಒಂದಾಗಿರಬಹುದು. ನಮಗೆ ಈ ಘಟನೆಗಳಲ್ಲಿ ಹೆಚ್ಚಿನವು ಬರಿಯ ಕಾಕತಾಳೀಯ ಘಟನೆಗಳಾಗಿ ಕಾಣುತ್ತವೆ. ಆದರೆ ಬಸವಣ್ಣನವರಂತೂ ಇವೆಲ್ಲ ದೈವಾನುಗ್ರಹವೆಂದೇ ತಿಳಿದಿದ್ದರು.

'ಗಣಕ' (ಅಥವಾ 'ಗಣಿತವಿತ್') ರಾಜ್ಯಾಡಳಿತದಲ್ಲಿ ಪ್ರಮುಖ ಅಧಿಕಾರಿ ಆಗಿದ್ದ. ಇವನಿಗೆ ಎರಡು ಮುಖ್ಯ ಗುಣಗಳಿರಬೇಕೆಂದು ನಿರೀಕ್ಷಿಸಲಾಗಿತ್ತು. ಇವೇ ಬುದ್ಧಿಮತ್ತೆ ಹಾಗೂ ಶುಚಿತ್ವ. ಹನ್ನೆರಡನೆಯ ಶತಮಾನದ ವಿಶ್ವಕೋಶ ಸದೃಶ ಕೃತಿಯಾದ 'ಮಾನಸೋಲ್ಲಾಸ'ದಲ್ಲಿ ಹೀಗೆಂದು ಹೇಳಲಾಗಿದೆ. ಆದರ್ಶ ಕರಣಿಕನಿಗೆ ಇರಬೇಕಾದ ಎಲ್ಲ ಗುಣಗಳೂ ಬಸವಣ್ಣನವರಲ್ಲಿದ್ದುವು. ಬಿಜ್ಜಳ ಹಾಗೂ ಸಿದ್ಧದಂಡಾಧಿಪರು ಅವರ ಕೆಲಸ ನೋಡಿ ಸಂತೋಷಪಟ್ಟರು. ಅನತಿಕಾಲದಲ್ಲಿಯೇ ಬಸವಣ್ಣನವರು ಮುಖ್ಯ ಭಂಡಾರಿಯೂ ಆದರು.

ಬಸವಣ್ಣನವರೀಗ ಅಧಿಕ ಸಂಪತ್ತಿನ ಅಧಿಕಾರ ಹೊಂದಿದ ಮಹಾ ವ್ಯಕ್ತಿ. ಆ ಸಂಪತ್ತನ್ನು ಬಡವರಿಗಾಗಿ ಹಾಗೂ ಶಿವಭಕ್ತರಾದ ಜಂಗಮರಿಗಾಗಿ ವ್ಯಯಿಸಲು ತಮಗೆ ಯಾವಾಗ ಸಾಧ್ಯವಾದೀತೋ ಎಂದು ಅವರು ಆಗಾಗ ಚಿಂತಿಸುತ್ತಿದ್ದರು. ಈ ನಡುವೆ ಕೋಶಾಧಿಕಾರಿ ಮೃತನಾದ - ಬಿಜ್ಜಳ ಸಂತೋಷದಿಂದಲೇ ಅವನ ಸ್ಥಾನದಲ್ಲಿ ಬಸವಣ್ಣನವರನ್ನು ಭಂಡಾರಿ ಪದವಿಗೆ ಏರಿಸಿದ. ಬಸವಣ್ಣನವರು 'ಬಸವದಂಡ ನಾಯಕ'ರೆನಿಸಿದರು. 'ದಂಡನಾಯಕ'ನೆಂಬ ಪದವಿ ಅವರೊಬ್ಬ ಉನ್ನತಾಧಿಕಾರಿಯೆಂದು ಸೂಚಿಸುತ್ತದೆ.

ಆಗ ಬಸವಣ್ಣನವರು ತಮ್ಮ ಬದುಕಿನ ಉಚ್ಛ್ರಾಯ ಕಾಲದಲ್ಲಿದ್ದರು. ಸ್ಥಾನ, ಅಧಿಕಾರ, ಖ್ಯಾತಿ - ಇವೆಲ್ಲವೂ ಅವರಿಗೆ ಲಭ್ಯವಾಗಿದ್ದುವು. ತಮ್ಮ ಆಶ್ರಯದಾತನಾದ ಸಿದ್ಧದಂಡನಾಥ ಮೃತನಾದ ಕೆಲಕಾಲದಲ್ಲಿಯೇ ಅವನ

ಇಬ್ಬರು ಹೆಣ್ಣು ಮಕ್ಕಳಾದ ಗಂಗಾದೇವಿ ಹಾಗೂ ಮಾಯಿದೇವಿ (ನೀಲ ಲೋಚನೆಯೆಂಬ ಇನ್ನೊಂದು ಹೆಸರೂ ಉಂಟು) ಇವರನ್ನು ಬಸವಣ್ಣ ನವರು ಮದುವೆಯಾದರು. ತಮ್ಮ ತಾರುಣ್ಯದಲ್ಲಿ ಅವರು ಸಂನ್ಯಾಸಿಯಾಗಿ ಜೀವನ ಸಾಗಿಸುವ ಕನಸು ಕಂಡಿದ್ದರೆಂಬುದನ್ನು ಇದೇ ಸಂದರ್ಭದಲ್ಲಿ ನಾವು ಜ್ಞಾಪಿಸಿಕೊಳ್ಳಬೇಕು. ವಯಸ್ಸಾಗುತ್ತಿದ್ದಂತೆ ಅವರ ವಿಚಾರ ಪರಿಪಕ್ವ ಗೊಂಡಿತು. ಅನಂತರದ ತಮ್ಮ ವಚನವೊಂದರಲ್ಲಿ ವಿವಾಹಜೀವನದ ಪರ ವಾಗಿ ಬಸವಣ್ಣನವರು ವಾದಿಸಿದ್ದಾರೆ. ಲೈಂಗಿಕ ಪ್ರವೃತ್ತಿಯನ್ನು ದಮನಗೊಳಿ ಸುವುದು ಅನೇಕ ಬಗೆಯ ಸಮಸ್ಯೆಗಳಿಗೆ ಕಾರಣವಾಗುತ್ತದೆಂದೂ ಅವರು ಹೇಳಿದ್ದಾರೆ.

ಬಸವಣ್ಣನವರ ವೈವಾಹಿಕ ಜೀವನ ಸಂತೋಷಕರವಾಗಿತ್ತು. ಅವರ ಇಬ್ಬರು ಮಡದಿಯರೂ ಸುಶಿಕ್ಷಿತರಾಗಿದ್ದರು. ಅವರು ಬಸವಣ್ಣನವರನ್ನು ಸಂಪೂರ್ಣ ವಾಗಿ ಅರ್ಥಮಾಡಿಕೊಂಡಿದ್ದರು. ಹಾಗೂ ಅವರ ಕ್ರಿಯಾಶೀಲ ಜೀವನದಲ್ಲಿ ಸಂಪೂರ್ಣ ಸಹಕಾರವನ್ನು ನೀಡಿದ್ದರು. ಬಸವಣ್ಣನವರ ಮನೆಗೆ ಯಾವಾಗಲೂ ಅಧಿಕ ಸಂಖ್ಯೆಯಲ್ಲಿ ಅತಿಥಿಗಳೂ ಸಂದರ್ಶಕರೂ ಬರುತ್ತಿ ದ್ದರು. ಸೋದರಿಯರು ಅಕ್ಕನಾಗಮ್ಮನೊಂದಿಗೆ ಅವರ ಆದರಾತಿಥ್ಯ ಮಾಡು ತ್ತಿದ್ದರು.

ಬಸವಣ್ಣನವರಿಗೆ ಹಣ ಹಾಗೂ ಅಧಿಕಾರಗಳು ಅನುಕೂಲಕರವಾಗಿ ಒದಗಿ ಬಂದುವು. ಆದರೆ ಇವು ಅವರನ್ನು ಭ್ರಷ್ಟರನ್ನಾಗಿ ಮಾಡಲಿಲ್ಲ. ಅದಕ್ಕಿಂತ ಹೆಚ್ಚಾಗಿ ಬಸವಣ್ಣನವರು ಇನ್ನಷ್ಟು ವಿನೀತರಾದರು. ಬಡವರ ಬಗೆಗೆ ಸಹಾನುಭೂತಿಯೂ ಶ್ರೀಮಂತರ ಬಗೆಗೆ ಘೃಣೆಯೂ ಅವರಿಗಿದ್ದುವು. ಅವರ ಮನೆಯ ಬಾಗಿಲು ಸದಾ ತೆರೆದಿರುತ್ತಿತ್ತು. ತಮ್ಮ ಹಣವನ್ನು ಕೊನೆಯ ಕಾಸಿನವರೆಗೂ ಅವರು ಧಾರ್ಮಿಕ ಉದ್ದೇಶಗಳಿಗಳಿಗಾಗಿಯೇ ವ್ಯಯಿಸಿದರು.

ಬಸವಣ್ಣನವರು ಆಚರಿಸಿದ ಹಾಗೂ ಪ್ರಸಾರ ಮಾಡಿದ ಧರ್ಮವೇ ವೀರ ಶೈವ ಧರ್ಮ. 'ನಾಯಕ' ಎಂಬುದು 'ವೀರ' ಎಂಬ ಪದದ ಸಾಮಾನ್ಯ ಅರ್ಥ. ತನ್ನ ಅನುಯಾಯಿಗಳು ಶಿವನ ಬಗ್ಗೆ ಏಕಾಗ್ರ ಮನಸ್ಸಿನ ಭಕ್ತಿ ಯನ್ನು ಹೊಂದಿರಬೇಕೆಂದು ವೀರಶೈವ ಧರ್ಮ ಒತ್ತಾಯ ಪಡಿಸುತ್ತದೆ. ಅಂದ ಮಾತ್ರಕ್ಕೆ ಇತರ ದೇವರುಗಳ ಬಗ್ಗೆ ಅಗೌರವ ತೋರಿಸಬೇಕೆಂದೇನೂ ಅರ್ಥವಲ್ಲ. ವೀರಶೈವರ ದೃಷ್ಟಿಯಲ್ಲಿ ಶಿವನೇ ಶ್ರೇಷ್ಠ. ಹೊಸ ಧಾರ್ಮಿಕ ಚಳವಳಿ ಯೊಂದು ಯಾವ ಉತ್ಸಾಹದೊಂದಿಗೆ ವ್ಯಾಪಕವಾಗಿ ಹಬ್ಬಿತು ಎಂಬುದನ್ನು 'ವೀರ' ಎಂಬ ಪದವೇ ಸೂಚಿಸುತ್ತದೆ. ವೀರಶೈವ ಧರ್ಮವನ್ನು ಕುರಿತ ವಿವರಣೆ ನೀಡಲೂ 'ಲಿಂಗಾಯತ' ಅಥವಾ 'ಲಿಂಗವಂತ' ಎಂಬ ಪದವನ್ನು ಬಳಸ ಲಾಗುತ್ತದೆ. ತಮ್ಮ ದೇಹದ ಮೇಲೆ ಲಿಂಗವನ್ನು ಧರಿಸುವವರೇ ಲಿಂಗಾಯ ತರು. ದೇವಾಲಯಕ್ಕೆ ಹೋಗದಂತೆ ಮತ್ತು ಅಲ್ಲಿ ಶಿವಲಿಂಗವನ್ನು ಪೂಜಿಸ

ದಂತೆ ಅವರಿಗೆ ಪ್ರತಿಬಂಧಕವಿತ್ತು. ದೇವಾಲಯವೆಂಬುದು ಅವರ ದೃಷ್ಟಿಯಲ್ಲಿ ಸಾಂಪ್ರದಾಯಿಕತೆ ಹಾಗೂ ಸಾಂಸ್ಥಿಕತೆಗಳನ್ನು ಪ್ರತಿನಿಧಿಸುತ್ತಿತ್ತು. ಶ್ರೀಮಂತರು ಮಾತ್ರ ದೇವಾಲಯಗಳನ್ನು ನಿರ್ಮಿಸಬಲ್ಲರು. ಬಡವರಿಗೆ ಅದು ಎಂದಿಗೂ ಸಾಧ್ಯವಿಲ್ಲ ಎಂದು ಅವರು ಸ್ಪಷ್ಟವಾಗಿ ತಿಳಿದಿದ್ದರು. ದೇವಾಲಯದಲ್ಲಿ ನಡೆಯುವ ಪೂಜೆ, ದೇವರು ಪ್ರಾಯಶಃ ಜನರಿಂದ ದೂರವಾಗಿರುವುದನ್ನು ಸೂಚಿಸುತ್ತದೆ ಎಂಬುದು ಅವರ ದೃಷ್ಟಿಯಾಗಿತ್ತು. ಪೂಜೆಯ ನಿಜವಾದ ಸ್ವರೂಪದ ಬಗ್ಗೆ ಬಸವಣ್ಣನವರು ಜನರಿಗೆ ಮೊತ್ತ ಮೊದಲ ಬಾರಿಗೆ ಮನವರಿಕೆ ಮಾಡಿಕೊಟ್ಟರು ಎಂಬುದನ್ನು ನಾವಿಲ್ಲಿ ನೆನಪಿಗೆ ತಂದುಕೊಳ್ಳಬೇಕು. ಆದ್ದರಿಂದ ತಳದಲ್ಲಿ ಚಪ್ಪಟೆಯಾದ ಹಾಗೂ ಸಣ್ಣ ಉರುಟು ಹಣ್ಣಿನ ಆಕಾರ ಮತ್ತು ಗಾತ್ರವಿರುವ ಚಿಕ್ಕ 'ಲಿಂಗ'ವೊಂದನ್ನು ದೇಹದಲ್ಲಿ ವೀರಶೈವರು ಧರಿಸಬೇಕೆಂಬ ನಿಯಮವಿತ್ತು. ಅದೇ 'ಇಷ್ಟ ಲಿಂಗ'. ದೇವಾಲಯದಲ್ಲಿ, ಪೂಜಿಸಲಾಗುವ 'ಸ್ಥಾವರ ಲಿಂಗ'ಕ್ಕೆ ಪ್ರತಿಯಾಗಿ ವೀರಶೈವರು ಈ 'ಇಷ್ಟಲಿಂಗ'ವನ್ನೇ ಬಟ್ಟೆಯ ಚೂರೊಂದರಲ್ಲಿ ಇಟ್ಟುಕೊಂಡು ಅದನ್ನು ಕುತ್ತಿಗೆಗೆ ಕಟ್ಟಿಕೊಳ್ಳುತ್ತಿದ್ದರು. ಅಥವಾ ಚಿಕ್ಕ ಸಂಪುಟ ವೊಂದರಲ್ಲಿಟ್ಟು ಅದನ್ನು ತಮ್ಮ ಎದೆಯ ಮೇಲೆ ವಿಶ್ರಮಿಸಿಕೊಳ್ಳುವ ರೀತಿಯಲ್ಲಿ ಕುತ್ತಿಗೆಗೆ ಕಟ್ಟಿಕೊಳ್ಳುತ್ತಿದ್ದರು. ಈ ಲಿಂಗವನ್ನು ದಿನಕ್ಕೆ ಎರಡು ಸಲ ಹೊರಗೆ ತೆಗೆದು ಅದನ್ನು ತಮ್ಮ ಅಂಗೈಯ ಮೇಲಿರಿಸಿಕೊಂಡು ಪೂಜಿಸುತ್ತಿದ್ದರು. ಯಾವುದೇ ಕಾಲದಲ್ಲಿಯೂ ವೀರಶೈವನು ಲಿಂಗವನ್ನು ತೆಗೆಯಬಾರದೆಂದು ಸಾಮಾನ್ಯವಾಗಿ ನಿರೀಕ್ಷಿಸಲಾಗಿತ್ತು. ಈ ಆಚರಣೆ ಎರಡು ವಿಚಾರಗಳನ್ನು ಸೂಚಿಸುತ್ತದೆ. ಮೊದಲನೆಯದಾಗಿ, ವ್ಯಕ್ತಿಯ ಆತ್ಮ 'ಪಶು' ಹಾಗೂ ಪರಮಾತ್ಮನೇ 'ಪಶುಪತಿ': ಪಶು ಯಾವಾಗಲೂ ಒಡೆಯನ (ಪಶುಪತಿಯ) ರಕ್ಷಣೆಯಲ್ಲಿರಬೇಕು. ಎರಡನೆಯದಾಗಿ ವ್ಯಕ್ತಿಯ ಆತ್ಮವು ಸ್ವತಃ ಪರಮಾತ್ಮನೇ ಆಗಿದ್ದು, ಅದು ನಿಧಾನವಾಗಿ ಹಾಗೂ ಏಕಪ್ರಕಾರವಾದ ಆಚರಣೆಗಳಿಂದ ಪರಮಾತ್ಮನ ಸ್ಥಾನಕ್ಕೆ ಏರಿ ಪರಮಾತ್ಮನೇ ಆಗಬಲ್ಲುದು.

ತನ್ನ ಅನುಯಾಯಿಗಳು ಗುರು, ಲಿಂಗ ಜಂಗಮರನ್ನು ಗೌರವಿಸಬೇಕೆಂದು ವೀರಶೈವ ಧರ್ಮ ನಿರೀಕ್ಷಿಸಿದೆ, ಹಾಗೂ ಪ್ರತಿಯೊಬ್ಬರಿಗೂ ಯುಕ್ತವಾದ ಮನ್ನಣೆ ನೀಡಬೇಕೆಂದೂ ಗೊತ್ತುಪಡಿಸಿದೆ. ವ್ಯಕ್ತಿಗೆ ವೀರಶೈವ ಧರ್ಮದ ದೀಕ್ಷೆಯನ್ನು ನೀಡುವ ಹಾಗೂ ಲಿಂಗವನ್ನು ಅನುಗ್ರಹಿಸುವ ಬೋಧಕನೇ ಗುರು. ದೀಕ್ಷೆ ಪಡೆದ ವ್ಯಕ್ತಿ ಯಾವಾಗಲೂ ಲಿಂಗವನ್ನು ಧರಿಸಿರಬೇಕು. 'ಜಂಗಮ'ವೆಂಬ ಪದದ ಅರ್ಥ 'ಚಲಿಸುವಂಥದ್ದು' ಅಥವಾ 'ಚಲಿಸುವಂಥವನು' ಎಂದು. ಆದ್ದರಿಂದ ಪೂಜ್ಯನಾದವನನ್ನು ವಿವರಿಸಲು ಈ ಪದವನ್ನು ಬಳಸಲಾಗುತ್ತದೆ. ಜಂಗಮನು ದೇವರೇ ಆಗಿದ್ದು ದೇವರ ಪ್ರತ್ಯಕ್ಷ ರೂಪವಾಗಿರುತ್ತಾನೆ. ಹಾಗೂ ಉಪದೇಶ ಮಾಡುತ್ತ ಒಂದು ಸ್ಥಳದಿಂದ

ಇನ್ನೊಂದು ಸ್ಥಳಕ್ಕೆ ಸಂಚರಿಸುತ್ತಿರುತ್ತಾನೆ. ಕೆಲವೊಮ್ಮೆ ಜಂಗಮನನ್ನು ದೇವರಿಗಿಂತಲೂ ಶ್ರೇಷ್ಠ ಎಂದೂ ಪರಿಗಣಿಸಲಾಗುತ್ತದೆ. ಆದ್ದರಿಂದ ಜಂಗಮರಿಗೆ ಹೆಚ್ಚು ಗೌರವ ತೋರಿಸಬೇಕು.

ಭಕ್ತಿ, ಜ್ಞಾನ ಮತ್ತು ವೈರಾಗ್ಯಗಳ ಪೈಕಿ, ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳುವ ಮಾರ್ಗವಾಗಿ, ಭಕ್ತಿಯ ಸ್ಥಾನವೇ ಸರ್ವೋತ್ಕೃಷ್ಟವಾಗಿರುತ್ತದೆ. ವೀರಶೈವರ ಧಾರ್ಮಿಕ ಪದ್ಧತಿಯಲ್ಲಿ ಉಳಿದೆರಡೂ ಭಕ್ತಿಗೆ ಅಧೀನವಾದುವು.

ಈ ವಿವರಣೆ ಅಪ್ರಸ್ತುತವಾದ ಒಂದು ಪ್ರಸ್ತಾಪವಾಗಿ ಕಾಣಬಹುದು. ಆದರೆ ಬಸವಣ್ಣನವರ ಧಾರ್ಮಿಕ ಜೀವನದ ಬಗ್ಗೆ ತಿಳಿದುಕೊಳ್ಳಲು ಇದು ಅಗತ್ಯವಾಗಿದೆ. ಪರಿಶುದ್ಧತೆ, ವಿನಯಶೀಲತೆ ಹಾಗೂ ಮಹಾ ಭಕ್ತಿ - ಇವುಗಳನ್ನು ಹೊಂದಿದ ವ್ಯಕ್ತಿಯಾಗಿ ಬಸವಣ್ಣನವರ ಖ್ಯಾತಿ ಬಹು ದೂರದವರೆಗೂ ಹಬ್ಬಿತು. 'ಮಹೇಶ್ವರರು' (ಶಿವನ ಭಕ್ತರು), ಜಂಗಮರು ಹಾಗೂ ಸಾಮಾನ್ಯ ಭಕ್ತರು ಅವರ ಮನೆಗೆ ಗುಂಪು ಗುಂಪಾಗಿ ಬಂದರು. ಅವರಲ್ಲಿ ಕೆಲವರು ತುಂಬ ದೂರದ ಪ್ರದೇಶಗಳಿಂದಲೂ ಬಂದಿದ್ದರು. ಬಸವಣ್ಣನವರ ಮನೆ ನಿಜವಾಗಿಯೂ ಒಂದು ಮಹಾ ಛತ್ರವಾಗಿತ್ತು. 'ಮಹಾಮನೆ' ಯೆಂಬ ಹೆಸರು ಅದಕ್ಕೆ ತುಂಬ ಒಪ್ಪುತ್ತಿತ್ತು. ಯಾವುದೇ ದಿನವಿರಲಿ, ಯಾವುದೇ ಸಮಯವಿರಲಿ, ಅವರ ಮನೆಯಲ್ಲಿ ಸರ್ವರಿಗೂ ಸ್ವಾಗತ ಸಿಗುತ್ತಿತ್ತು. ತಮ್ಮ ಇಷ್ಟ ಲಿಂಗ ಪೂಜೆಗೆ ಅಗತ್ಯವಾದ ಎಲ್ಲ ಸೌಲಭ್ಯಗಳನ್ನು ಅಲ್ಲಿ ಅತಿಥಿಗಳಿಗೆ ನೀಡಲಾಗುತ್ತಿತ್ತು. ಅವರಿಗೆ ಉತ್ತಮ ಭೋಜನದ ವ್ಯವಸ್ಥೆಯನ್ನೂ ಮಾಡಲಾಗಿತ್ತು. ಬಸವಣ್ಣನವರ ಭಕ್ತಿ ಹಾಗೂ ಪ್ರಾಮಾಣಿಕತೆಗಳು ಅವರಿಗೆ ಬಹಳ ಮೆಚ್ಚುಗೆಯಾದುವು. ಅವರು ಬಸವಣ್ಣನವರನ್ನು ಹೊಗಳಿದರು. ಅವರಿಗಿಂತ ದೊಡ್ಡವನಾದ ಇನ್ನೊಬ್ಬ ಶರಣನನ್ನು ತಾವು ಈ ಲೋಕದಲ್ಲಿ ಬೇರೆಲ್ಲಿಯೂ ಕಂಡಿಲ್ಲವೆಂದು ಪ್ರಚಾರ ಮಾಡಿದರು. ಆದರೆ ಬಸವಣ್ಣನವರು ತಮ್ಮನ್ನು ಸ್ತುತಿಸಲು ಯಾರಿಗೂ ಅವಕಾಶ ಮಾಡಿಕೊಡುತ್ತಿರಲಿಲ್ಲ. ಹೊಗಳಿಕೆ ತಮ್ಮನ್ನು ಗರ್ವಿಷ್ಠರನ್ನಾಗಿ ಮಾಡಬಹುದೆಂಬ ಶಂಕೆ ಅವರಿಗಿತ್ತು. ಆದ್ದರಿಂದ ತಮ್ಮನ್ನು ಹೊಗಳದಂತೆ ಅವರು ಸ್ತುತಿಪಾಠಕರನ್ನು ಬೇಡಿಕೊಂಡರು:

ಎನ್ನವರೊಲಿದು ಹೊನ್ನ ಶೂಲದಲ್ಲಿಕ್ಕಿದರೆನ್ನ ಹೊಗಳಿ, ಹೊಗಳಿ!
ಎನ್ನ ಹೊಗಳತೆ ಎನ್ನ ನಿಮ್ಮೆಯ್ಗೊಂಡಿತ್ತಲ್ಲಾ!
ಅಯ್ಯೋ, ನಿಮ್ಮ ಮನ್ನಣೆಯೇ ಮಸೆದಲಗಾಗಿ ತಾಗಿತ್ತಲ್ಲಾ!
ಅಯ್ಯೋ! ನೊಂದೆನು, ಸೈರಿಸಲಾರೆನು.
ಕೂಡಲಸಂಗಮದೇವಾ, ನೀನೆನಗೊಳ್ಳಿದನಾದರೆ,
ಎನ್ನ ಹೊಗಳತೆಗಡ್ಡ ಬಾರಾ, ಧರ್ಮಿ! *

* ಶ್ರೀ ಎಸ್.ಎಸ್. ಬಸವನಾಳರು ಬಸವಣ್ಣನವರ ವಚನಗಳನ್ನು 1951ರಲ್ಲಿ

ಹಾಡುತ್ತಾ, ಶಿವನ ನಾಮಸ್ಮರಣೆ ಮಾಡುತ್ತಾ ಬಸವಣ್ಣನವರು ಅವರೊಂದಿಗೆ ರಾತ್ರಿಗಳನ್ನು ಕಳೆಯುತ್ತಿದ್ದರು. ತಮ್ಮಂತಹ ಮನೋಭಾವವನ್ನೇ ಹೊಂದಿದ ಜನರೊಂದಿಗೆ ಕಾಲ ಕಳೆಯುವುದು ಅವರಿಗೆ ಸಂತೋಷದ ಹಾಗೂ ಆನಂದ ಪರವಶಗೊಳಿಸುವ ವಿಚಾರವಾಗಿತ್ತು. ವರ್ಷದ ಎಲ್ಲ ದಿನಗಳಂದೂ 'ಶಿವರಾತ್ರಿ'ಯನ್ನು ಆಚರಿಸುವ 'ಭಾಷೆ' (ಪ್ರತಿಜ್ಞೆ)ಯನ್ನು ಅವರು ಮಾಡಿದ್ದರು.

ಬಸವಣ್ಣನವರು ಇತರ ಕೆಲವು ಭಾಷೆಗಳನ್ನೂ ಮಾಡಿ ಅವುಗಳನ್ನು ನಿಷ್ಠೆಯಿಂದ ಆಚರಣೆಗೆ ತಂದರು. ಇವುಗಳಲ್ಲಿ ಕೆಲವು, ಜಂಗಮರನ್ನು ದೇವರಂತೆ ಕಾಣುವುದು, ಶಿವನಭಕ್ತರನ್ನು ಎಂದೂ ಟೀಕಿಸದಿರುವುದು, ನುಡಿದಂತೆ ನಡೆಯುವುದು, ಶರಣರು ಕೇಳಿದ್ದನ್ನು ನೀಡುವುದು, ಯಾರಿಂದಲೂ ಯಾವ ಕೃಪೆಯನ್ನೂ ಯಾಚಿಸದೆ ಇರುವುದು, ಅನ್ಯ ಧರ್ಮಗಳನ್ನು ಅಪಜಯಗೊಳಿಸಿ ತಮ್ಮ ಧರ್ಮದ ಪ್ರಸಾರಕ್ಕಾಗಿ ಹೆಣಗುವುದು, ತಾವೆಂದೂ ಮೆತ್ತೆಯ ಮೇಲೆ ಮಲಗಿ ನಿದ್ರಿಸುವುದಿಲ್ಲವೆಂದು ಕೂಡ ಒಮ್ಮೆ ಅವರು ಭಾಷೆ ಮಾಡಿದ್ದುಂಟು. ಯಾವ ಜಂಗಮನ ವೇಷದಲ್ಲಾದರೂ ದೇವರು ಯಾವುದೇ ವೇಳೆಯಲ್ಲಿ ತಮ್ಮಲ್ಲಿಗೆ ಬರಬಹುದೆಂಬ ಆಲೋಚನೆಯೇ ಈ ಭಾಷೆ ಮಾಡಲು ಕಾರಣವಾಗಿತ್ತು.

ಇತರ ಧರ್ಮಗಳನ್ನು ಅಪಜಯಗೊಳಿಸಿ, ತಮ್ಮ ಧರ್ಮವನ್ನು ಪ್ರಸಾರ ಮಾಡುವುದೂ ಅವರ ಭಾಷೆಗಳಲ್ಲಿ ಒಂದಾಗಿತ್ತು ಎಂಬುದನ್ನು ನಾವು ಈಗಾಗಲೇ ನೋಡಿದ್ದೇವೆ. ಅನ್ಯಧರ್ಮಗಳನ್ನು ಖಂಡಿಸಿ ಸ್ವಧರ್ಮವನ್ನು ಎತ್ತುವುದು ಆ ಕಾಲದಲ್ಲಿ ಸಾಮಾನ್ಯವಾಗಿ ಕಂಡು ಬರುತ್ತಿದ್ದ ಆಚರಣೆಯಾಗಿತ್ತು. ಇತರ ಧರ್ಮಗಳಲ್ಲಿನ ಕೆಡುಕಿನ ಅಂಶಗಳನ್ನು ತಮ್ಮ ವಚನಗಳಲ್ಲಿ ಬಸವಣ್ಣನವರು ತೀವ್ರವಾಗಿ ಖಂಡಿಸಿದ್ದಾರೆ. ಹೊರಗಿನವನೊಬ್ಬನಿಗೆ, ಉದಾಹರಣೆಗೆ, ಹೊರ ಜಾತಿಯವನಿಗೆ ಬ್ರಾಹ್ಮಣನಾಗಲು ಬ್ರಾಹ್ಮಣಧರ್ಮ ಎಂದೂ ಅವಕಾಶನೀಡುತ್ತಿದ್ದಿಲ್ಲ. ವರ್ಗ, ಸಮುದಾಯ, ಮತ ಅಥವಾ ವೃತ್ತಿ ಯಾವುದೇ ಆಗಿರಲಿ, ಯಾರು ಬೇಕಾದರೂ ವೀರಶೈವನಾಗಲು ಸಾಧ್ಯ ಎಂದು ಬಸವಣ್ಣನವರು ಘೋಷಿಸಿದರು. ವ್ಯಕ್ತಿ ಒಮ್ಮೆ ವೀರಶೈವನಾದನೆಂದರೆ ಮತ್ತೆ ಅವನು ಎಲ್ಲರಿಗೂ ಸಮನಾಗುತ್ತಾನೆ. ವೀರಶೈವ ಧರ್ಮ ವ್ಯಕ್ತಿಗಳಿಗೆ ಸಂಬಂಧಿಸಿದಂತೆ ಎರಡು ವಿಚಾರಗಳನ್ನು ಅಪೇಕ್ಷಿಸುತ್ತಿತ್ತು. ಮೊದಲನೆಯದಾಗಿ, ತನ್ನ ಹಿಂದಿನ ಧರ್ಮದೊಡನಿದ್ದ ಸಂಪರ್ಕಗಳನ್ನು ಅವನು ಕಡಿದು

---

ವಿಮರ್ಶಾತ್ಮಕವಾಗಿ ಪರಿಷ್ಕರಿಸಿ ಪ್ರಕಟಿಸಿದ್ದು ಅವರು ಸಂಪಾದಿಸಿದ ಗ್ರಂಥವನ್ನೇ ಇಲ್ಲಿ ಅನುಸರಿಸಲಾಗಿದೆ ('ಬಸವಣ್ಣನವರ ಷಟ್‌ಸ್ಥಳದ ವಚನಗಳು', ಲಿಂಗಾಯತ ವಿದ್ಯಾಭಿವೃದ್ಧಿ ಸಮಿತಿ, ಧಾರವಾಡ).

ಕೊಳ್ಳಬೇಕು. ಮತ್ತು ಇಷ್ಟಲಿಂಗ ಧಾರಣೆ ಮಾಡಿ ನೂತನ ಧರ್ಮದ ದೀಕ್ಷೆಯನ್ನು ಪಡೆಯಬೇಕು. ಎರಡನೆಯದಾಗಿ, ಅವನು ಶಿವನಲ್ಲಿ ಸಂಪೂರ್ಣ ಶ್ರದ್ಧೆಯನ್ನು ಇಡಬೇಕು. ವೀರಶೈವನು ಮಾಡಬೇಕೆಂದು ನಿರೀಕ್ಷಿಸಲಾಗಿದ್ದ ಧಾರ್ಮಿಕ ಆಚರಣೆಗಳು ತುಂಬ ಸರಳವಾಗಿದ್ದುವು. ಅವನು ಹಣೆಗೆ ಭಸ್ಮ ಹಚ್ಚಿಕೊಳ್ಳಬೇಕು; ಮಾಂಸಾಹಾರವನ್ನು ಮದ್ಯಸೇವನೆಯನ್ನೂ ನಿಲ್ಲಿಸಬೇಕು; ಸಂಪೂರ್ಣ ಸಸ್ಯಾಹಾರಿಯಾಗಿರಬೇಕು; ಯಾವಾಗಲೂ ಸತ್ಯವನ್ನೇ ನುಡಿಯಬೇಕು; ಕಳುವುದನ್ನೂ ಕೊಲ್ಲುವುದನ್ನೂ ನಿಲ್ಲಿಸಬೇಕು, ಅವನು ಲೋಭಿಯಾಗಿರಬಾರದು; ಆಲಸಿಯಾಗಿರಬಾರದು. ಏಕೆಂದರೆ ಪ್ರತಿಯೊಬ್ಬ ವ್ಯಕ್ತಿಯೂ ಒಂದು ವೃತ್ತಿಯನ್ನು ಕೈಗೊಂಡು ತನ್ನ ಜೀವನನಿರ್ವಹಣೆಗಾಗಿ ಕಷ್ಟಪಟ್ಟು ದುಡಿಯಬೇಕು. ಅವನು ದೇವಾಲಯಕ್ಕೆ ಹೋಗಬೇಕಾಗಿಲ್ಲ; ಏಕೆಂದರೆ ದೇಹವೇ ದೇವಾಲಯ ಹಾಗೂ ಶಿವಭಕ್ತರಿರುವ ಸ್ಥಳವೇ ಪುಣ್ಯ ಕ್ಷೇತ್ರ. ಪೂಜೆ ಮಾಡಲು ಸಮಯವಾಗಲಿ ಸಂಪನ್ಮೂಲಗಳಾಗಲಿ ಇಲ್ಲದಿದ್ದರೂ ವ್ಯಕ್ತಿ ಚಿಂತಿಸಬೇಕಾಗಿಲ್ಲ. ಭಕ್ತನಿಗೆ ದೇವರಲ್ಲಿ ಇರಬೇಕಾದ ಶ್ರದ್ಧೆಯೇ ನಿಜವಾಗಿ ಮಹತ್ವದ ವಿಚಾರ. ಇವೆಲ್ಲ ವಿಚಾರಗಳು ಜನಸಾಮಾನ್ಯರಿಗೆ, ಅದರಲ್ಲೂ ವಿಶೇಷವಾಗಿ ಬಡವರಿಗೆ ಹಾಗೂ ತುಳಿತಕ್ಕೊಳಗಾದವರಿಗೆ ತುಂಬ ರುಚಿಸಿದುವು. ತಮ್ಮ ಉದ್ಧಾರಕ್ಕಾಗಿ ವಿಮೋಚಕನೊಬ್ಬ ಅವತರಿಸಿ ಬಂದಿರುವನೆಂದೇ ಅವರಿಗನಿಸಿತು. ಸಾವಿರಾರು ಮಂದಿ ಬಂದು ಬಸವಣ್ಣನವರ ವೀರಶೈವ ಧರ್ಮವನ್ನು ಸ್ವೀಕರಿಸಿದರು. ಹೀಗೆ ಬಂದವರಲ್ಲಿ ಕೃಷಿಕರು, ನೇಕಾರರು, ಮೋಚಿಗಳು, ಬೆಸ್ತರು, ಬೇಡರು, ಬುಟ್ಟಿ ತಯಾರಿಸುವವರು, ಕ್ಷೌರಿಕರು, ವರ್ತಕರು ಮತ್ತು ಬ್ರಾಹ್ಮಣರು ಕೂಡ ಸೇರಿದ್ದರು.

ಕಪ್ಪಡಿ ಸಂಗಮದಲ್ಲಿ ಬಸವಣ್ಣನವರು ಒಬ್ಬ ವ್ಯಕ್ತಿಯಷ್ಟೇ ಆಗಿದ್ದರು. ಆದರೆ ಮಂಗಳವೇಡದಲ್ಲಿ ಅವರು ಜನಸಾಮಾನ್ಯರ ನಾಯಕರೂ ಸಮಾಜ ಸುಧಾರಕರೂ ಕ್ರಾಂತಿಯೊಂದರ ಮುಖಂಡರೂ ಆದರು. ಹೀಗೆ ಅವರು ಕ್ರಾಂತಿಯ ಒಂದು ಸಂಕೇತವಾದರು. ಅವರ ಆಧ್ಯಾತ್ಮಿಕ ಸಾಧನೆಯೂ ಸಾಮಾಜಿಕ ಚಟುವಟಿಕೆಗಳೂ ಜೊತೆ ಜೊತೆಯಾಗಿ ಸಾಗಿದುವು.

ಮಂಗಳವೇಡದಲ್ಲಿ ಬಸವಣ್ಣನವರು ಎಷ್ಟು ಕಾಲ ಉಳಿದರೆಂಬುದು ತಿಳಿದಿಲ್ಲ. ಅಲ್ಲಮಪ್ರಭುವಿನಂತಹ ಅವರ ಸಂಗಡಿಗರಲ್ಲಿ ಅನೇಕರು ಮೊತ್ತ ಮೊದಲ ಬಾರಿಗೆ ಅವರನ್ನು ಭೇಟಿಯಾದದ್ದು ಮಂಗಳವೇಡದಲ್ಲಿಯೇ. ಅವರು ತಮ್ಮ ಕ್ರಾಂತಿಯ ಬೀಜವನ್ನು ಬಿತ್ತಿದ್ದು ಕೂಡ ಮಂಗಳವೇಡದಲ್ಲಿಯೇ. ಆದರೆ ಆ ಬೀಜ ಮೊಳಕೆಯೊಡೆದು, ಬೆಳೆದು, ಫಲಬಿಟ್ಟದ್ದು ಮಾತ್ರ ಕಲ್ಯಾಣದಲ್ಲಿ.

ಬಸವಣ್ಣನವರು ಭಂಡಾರಿಯಾಗಿದ್ದಾಗ, ವಿಶೇಷ ಪರಿಣಾಮಕಾರಿಯಾದ ಅನೇಕ ರಾಜಕೀಯ ಘಟನೆಗಳು ನಡೆದುವು. ಹಿಂದೆಯೇ ನಾವು ನೋಡಿ

ದಂತೆ, ಕ್ರಿ.ಶ. 1162 ರಲ್ಲಿ ಚಾಲುಕ್ಯ ಸಿಂಹಾಸನದ ಮೇಲೆ ಆಕ್ರಮಣ ನಡೆಸಿದ ಬಿಜ್ಜಳನು ತನ್ನ ರಾಜಧಾನಿಯನ್ನು ಮಂಗಳವೇಡದಿಂದ ಕಲ್ಯಾಣಕ್ಕೆ ಸ್ಥಳಾಂತರಿಸಿದ. ಪರಿಣಾಮವಾಗಿ ಕ್ರಿ.ಶ. 1162 ರಲ್ಲಿ ಅಥವಾ ಅದಕ್ಕೂ ಮೊದಲೇ ಬಸವಣ್ಣನವರೂ ಕಲ್ಯಾಣಕ್ಕೆ ತೆರಳಿದರು. ಆದರೆ ಅವರು ತಮ್ಮ ಹಿಂದಿನ ಹುದ್ದೆಯಲ್ಲಿಯೇ ಮುಂದುವರೆದರು. ಅವರು ಈಗ ಸಾಮ್ರಾಜ್ಯದ ಮುಖ್ಯ ಭಂಡಾರಿಯೆಂಬುದೊಂದೇ ವ್ಯತ್ಯಾಸ.

ಸಾಮ್ರಾಜ್ಯವನ್ನು ಬಿಜ್ಜಳ ಅತಿಕ್ರಮಿಸಿಕೊಂಡ ಬಗ್ಗೆ ಬಸವಣ್ಣನವರ ಪ್ರತಿಕ್ರಿಯೆಯಾದರೂ ಏನಾಗಿತ್ತು? ಉತ್ತರ ಸರಳವಾಗಿದೆ. ನಮಗೆ ತಿಳಿದಿಲ್ಲ. ತಮ್ಮ ಸೇವಾವಧಿಯ ಪ್ರಾರಂಭದಲ್ಲಿ ಅವರು ಬಿಜ್ಜಳನ ವಿನೀತ ಸೇವಕರಾಗಿದ್ದರು. ಅವರು ಈ ಘಟನೆಗಳಿಗೆ ಹೊಂದಿಕೊಂಡರು ಹಾಗೂ ಶಾಂತವಾಗಿ ಮತ್ತು ತಮಗೆ ಯಾವುದೇ ಸಂಬಂಧವಿಲ್ಲದಂತೆ ತಮ್ಮ ಕೆಲಸವನ್ನು ಮುಂದುವರಿಸಿಕೊಂಡು ಹೋದರು.

ರಾಜಧಾನಿಯ ಸ್ಥಳಾಂತರ ಬಸವಣ್ಣನವರ ಹಾಗೂ ಅವರ ಕಾರ್ಯ ಚಟುವಟಿಕೆಗಳ ಮೇಲೆ ಪ್ರಬಲ ಪರಿಣಾಮ ಬೀರಿತು. ಆಗ ಅವರು ಶ್ರೀಮಂತ ಭಂಡಾರವೊಂದರ ಆಡಳಿತ ನಿರ್ವಹಣೆಯ ಹೊಣೆ ಹೊತ್ತಂಥಹ ಅತ್ಯುನ್ನತ ಹಾಗೂ ಹೆಚ್ಚು ಪ್ರಭಾವಶಾಲಿ ಅಧಿಕಾರಿಯಾಗಿದ್ದರು. ಮಂಗಳವೇಡ ಚಿಕ್ಕ ಪಟ್ಟಣವಾಗಿದ್ದರೆ ಕಲ್ಯಾಣ ದೊಡ್ಡ ನಗರವಾಗಿತ್ತು. ಮಂಗಳವೇಡದಲ್ಲಿ ಬಸವಣ್ಣನವರು ಪ್ರಾರಂಭಿಸಿದ ಸಾಮಾಜಿಕ ಕ್ರಾಂತಿಗೆ ಕಲ್ಯಾಣದಲ್ಲಿ ಪ್ರಚೋದನೆ ದೊರೆಯಿತು.

# 5. ಕಲ್ಯಾಣ

ಚಾಲುಕ್ಯರ ರಾಜಧಾನಿಯಾಗಿದ್ದ ಕಲ್ಯಾಣ, ಈಗ ಬೀದರ್ ಜಿಲ್ಲೆಗೆ ಸೇರಿರುವಂತಹ ಒಂದು ಚಿಕ್ಕ ಪಟ್ಟಣ. ಬಸವಣ್ಣನವರ ಹೆಸರು ಪಡೆದ ಇದು ಈಗ 'ಬಸವಕಲ್ಯಾಣ'ವೆನಿಸಿದೆ. ಹನ್ನೆರಡನೆಯ ಶತಮಾನದ ವೀರಶೈವ ಚಳವಳಿಯನ್ನು ನೆನಪಿಗೆ ತರುವ ಪುರಾತನ ಅವಶೇಷಗಳಿಂದ ತುಂಬಿರುವ ಈ ನಗರ ವೀರಶೈವರ ಹಾಗೂ ಕನ್ನಡ ಸಾಹಿತ್ಯದ ವಿದ್ಯಾರ್ಥಿಗಳ ದೃಷ್ಟಿಯಿಂದ ಮಾಂತ್ರಿಕ ಸ್ಪರ್ಶವನ್ನು ಹೊಂದಿದೆ. ಬಸವಣ್ಣನವರು, ಅಕ್ಕನಾಗಮ್ಮ, ಅಲ್ಲಮ ಪ್ರಭು, ಹಾಗೂ ಆ ಕಾಲದ ಇತರ ಶರಣರು ಇಲ್ಲಿ ತಪಸ್ಸು ಮಾಡಿದ್ದರು ಎಂದು ನಂಬಲಾದ ಗುಹೆಗಳೂ ದೇವಾಲಯಗಳೂ ಕಲ್ಯಾಣದಲ್ಲಿವೆ. ಬಸವಣ್ಣನವರು ಬಡವರಿಗೆ ದಾನದಧರ್ಮಗಳನ್ನು ಮಾಡಿದ್ದರೆಂದೂ ತಮ್ಮ ಸಂಗಡಿಗರೊಂದಿಗೆ ಚರ್ಚೆಗಳನ್ನು ನಡೆಸಿದ್ದರೆಂದೂ ನಂಬಲಾದ ಸ್ಥಳಗಳನ್ನು ಇಲ್ಲಿ ಸಂದರ್ಶಕರಿಗೆ ತೋರಿಸಲಾಗುತ್ತದೆ. ಇಂಥ ಸ್ಮಾರಕ ಸ್ಥಳಗಳಿಂದಾಗಿ ಕಲ್ಯಾಣ ಆಕರ್ಷಣೀಯವಾಗಿದೆ ಹಾಗೂ ವೀರಶೈವರ ಯಾತ್ರಾ ಸ್ಥಳವಾಗಿದೆ.

ಐತಿಹಾಸಿಕವಾಗಿ ಕಲ್ಯಾಣವು ರಾಜಕೀಯ, ಧಾರ್ಮಿಕ ಹಾಗೂ ಇತರ ಚಟುವಟಿಕೆಗಳಿಂದ ಕೂಡಿದ ದೊಡ್ಡ ನಗರವಾಗಿತ್ತು. ವಿಜ್ಞಾನೇಶ್ವರನ ಬೆರಗುಗೊಳಿಸುವಂತಹ ಈ ನಗರದ ವಿವರಣೆಯನ್ನೂ ನಾವು ಈಗಾಗಲೇ ನೋಡಿದ್ದೇವೆ. ನಗರದ ವಿಸ್ತೀರ್ಣ ಹಾಗೂ ಅಲ್ಲಿನ ವ್ಯಾಪಾರ ವ್ಯವಹಾರಗಳ ಚಿತ್ರವನ್ನು 12 ಕ್ಕೂ ಅಧಿಕವಾದ ಸ್ಥಳೀಯ ಶಾಸನಗಳು ವಿವರಿಸುತ್ತವೆ. ಅನೇಕ ದೇವತೆಗಳ ದೇವಾಲಯಗಳು ಕಲ್ಯಾಣದಲ್ಲಿವೆ. ಇವುಗಳಲ್ಲೊಂದು ಕಾಳಾಮುಖರ ಆಡಳಿತಕ್ಕೆ ಒಳಪಟ್ಟಿತ್ತು. ಕಲ್ಯಾಣದಲ್ಲಿ ಶೈವರೂ ವೈಷ್ಣವರೂ ಜೈನರೂ ಇದ್ದರು. ಕಡಿಮೆ ಸಂಖ್ಯೆಯಲ್ಲಿಯೇ ಆಗಿದ್ದರೂ ಬೌದ್ಧರು ಕೂಡ ಅಲ್ಲಿದ್ದರೆಂದು ನಂಬಲು ಆಧಾರವಿದೆ. ಅದೊಂದು ಧಾರ್ಮಿಕ ಹಾಗೂ ಶೈಕ್ಷಣಿಕ ಕೇಂದ್ರವಾಗಿತ್ತು. ಬ್ರಾಹ್ಮಣರೂ 'ಗೊರವ'ರೆಂಬ ಕಾಳಾಮುಖ ಸಂನ್ಯಾಸಿಗಳೂ ಸಮಾಜದಲ್ಲಿ ಗೌರವಪಾತ್ರರಾಗಿದ್ದರು. ಕಲ್ಯಾಣದಲ್ಲಿ ವ್ಯಾಪಾರ ವಾಣಿಜ್ಯಗಳು ಉಚ್ಛ್ರಾಯಸ್ಥಿತಿಗೆ ಏರಿದ್ದವು. 'ವಡ್ಡ ವ್ಯವಹಾರಿಗಳು' (ಮಹಾ ವರ್ತಕರು) ಹಾಗೂ 'ಉಭಯದೇಸಿಗಳು' (ಎರಡು ದೇಶಗಳಿಗೆ ಸೇರಿದ ವರ್ತಕರು) - ಇವರಿಗೆ ಸಂಬಂಧಿಸಿದ ಅನೇಕ ವಿಷಯಗಳನ್ನು ನಾವು ಶಾಸನದಲ್ಲಿ ಓದುತ್ತೇವೆ. ಮೊದಲನೆಯ ವಡ್ಡ ವ್ಯವಹಾರಿಗಳು ಒಂದು ಪ್ರತ್ಯೇಕ

ನಾಡು (ರಾಜ್ಯ) ಅಥವಾ ಸ್ಥಳಕ್ಕೆ ಸೀಮಿತಗೊಂಡ ವ್ಯಾಪಾರ ಚಟುವಟಿಕೆಗಳನ್ನು ಹೊಂದಿದ ವರ್ತಕರನ್ನು ಪ್ರತಿನಿಧಿಸುತ್ತಿದ್ದರೆ ಎರಡನೆಯ ಉಭಯ ದೇಸಿಗಳು ರಾಜ್ಯದ ಸರಹದ್ದುಗಳಾಚೆ ಇರುವ ಪ್ರದೇಶಗಳಿಗೂ ವಿಸ್ತರಿಸಿದ ವ್ಯಾಪಾರ ಚಟುವಟಿಕೆಗಳನ್ನು ನಡೆಸುತ್ತಿದ್ದವರನ್ನು ಪ್ರತಿನಿಧಿಸುತ್ತಿದ್ದರು. ಬೇರೆ ಬೇರೆ ಜಾತಿಗಳಿಗೆ ಸೇರಿದವರು ತಮ್ಮದೇ ಆದ ಬೀದಿಗಳನ್ನು ಹೊಂದಿದ್ದರು. ಒಂದು ಶಾಸನದಲ್ಲಿ 'ಸಂಪಿಗಗೇರಿ'ಯ ಪ್ರಸ್ತಾಪವಿದೆ. 'ರಾಯನಾರಾಯಣ ಪುರ' ವೆಂಬ ಹೆಸರಿನ ಬಡಾವಣೆಯೊಂದರಲ್ಲಿ ಬ್ರಾಹ್ಮಣರೂ ನೆಲಸಿದ್ದರು. ಟಂಕಸಾಲೆಯ ಪ್ರಸ್ತಾಪ ಇನ್ನೊಂದು ಶಾಸನದಲ್ಲಿ ಬರುತ್ತದೆ. ಒಟ್ಟಿನಲ್ಲಿ ಚಟುವಟಿಕೆಗಳಿಂದ ಕೂಡಿದ ಒಂದು ದೊಡ್ಡ ನಗರವಾಗಿತ್ತು ಕಲ್ಯಾಣ.

ಬಸವಣ್ಣನವರು ಕ್ರಿ.ಶ. 1162 ರಲ್ಲಿ, ಎಂದರೆ ಬಿಜ್ಜಳನು ತಾನೇ ಚಕ್ರವರ್ತಿಯೆಂದು ಅಧಿಕೃತವಾಗಿ ಘೋಷಿಸಿಕೊಂಡಾಗ, ಕಲ್ಯಾಣಕ್ಕೆ ಬಂದರೆಂದು ನಾವು ಕಳೆದ ಅಧ್ಯಾಯದಲ್ಲಿ ನೋಡಿದ್ದೇವೆ. ಬಿಜ್ಜಳ ಧೀರ ಯೋಧನೂ ಬುದ್ಧಿವಂತ ಹಾಗೂ ಶಕ್ತ ಆಡಳಿತಗಾರನೂ ಆಗಿದ್ದ. ಹಿಂದಿನ ಚಕ್ರವರ್ತಿಗಳ ಎಲ್ಲ ಬಿರುದುಗಳನ್ನೂ ಅವನು ಧರಿಸಿದ್ದ. ಬಿಜ್ಜಳನ ಕಲಿತನದ ಬಗ್ಗೆ ಅವನ ಕಾಲದ ಶಾಸನಗಳು ತಿಳಿಸುತ್ತವೆ. ಯುದ್ಧರಂಗದಲ್ಲಿಯೇ ಸಾಕಷ್ಟು ಆನೆಗಳನ್ನೂ ಕುದುರೆಗಳನ್ನು ಜಯಿಸಿದ್ದುದರಿಂದ ಅವನೆಂದೂ ಆನೆಯನ್ನಾಗಲಿ ಕುದುರೆಯನ್ನಾಗಲಿ ಕೊಂಡು ತಂದಿಲ್ಲ ಎಂದು ಒಂದು ಶಾಸನ ಹೇಳುತ್ತದೆ. ಇದು ಸ್ಪಷ್ಟವಾಗಿ ಉತ್ಪ್ರೇಕ್ಷೆ ಎನಿಸುತ್ತದೆ. ಬಿಜ್ಜಳ ದೈವಭೀರುವಾಗಿದ್ದನೆಂದೂ ನಾವು ಶಾಸನಗಳಲ್ಲಿ ಓದುತ್ತೇವೆ. ದೂರ ದೃಷ್ಟಿಯುಳ್ಳ ಆಡಳಿತಗಾರನಾಗಿದ್ದ ಅವನು ಎಲ್ಲ ಧರ್ಮಗಳನ್ನೂ ಸಮದೃಷ್ಟಿಯಿಂದ ನೋಡುತ್ತಿದ್ದ.

ಬಸವಣ್ಣನವರು ಭಂಡಾರಿಯಾಗಿಯೇ ಮುಂದುವರೆದರು. ಭಂಡಾರಿಯ ಮುಖ್ಯ ಕರ್ತವ್ಯಗಳು ಎರಡು: ರಾಜ್ಯದ ಆದಾಯ ವೆಚ್ಚಗಳ ಮೇಲೆ ಕಣ್ಣಿಡುವುದು ಹಾಗೂ ಲೆಕ್ಕ ಪತ್ರಗಳ ದಾಖಲೆಗಳನ್ನಿಡುವುದು. ಹೀಗೆ ಇದು ಹೆಚ್ಚು ಜವಾಬ್ದಾರಿಯುತವಾದ ಮತ್ತು ಕಷ್ಟದ ಉದ್ಯೋಗ ಆಗಿತ್ತೆಂಬುದರಲ್ಲಿ ಸಂದೇಹವಿಲ್ಲ.

ಮೊದಮೊದಲು ಬಸವಣ್ಣನವರು ನಿಜವಾಗಿಯೂ ಬಿಜ್ಜಳನಿಗೆ ತುಂಬ ನಿಷ್ಠರಾಗಿದ್ದರೆಂದು ಕಾಣುತ್ತದೆ. ಬಿಜ್ಜಳನು ನ್ಯಾಯ ವಿರುದ್ಧವಾದ ಮಾರ್ಗದಿಂದ ಚಕ್ರವರ್ತಿಯಾದನೆಂದು ನಾವು ಹಿಂದೆಯೇ ನೋಡಿದ್ದೇವೆ. ಆದ್ದರಿಂದ ಅವನು ಬಸವಣ್ಣನವರ ಬಗ್ಗೆ ಸಂಶಯ ಸ್ವಭಾವವನ್ನು ಬೆಳೆಸಿಕೊಂಡದ್ದು ಸಹಜವೇ ಆಗಿದೆ. ತನ್ನ ಸುತ್ತ ಪ್ರಾಮಾಣಿಕರೂ ವಿನೀತರೂ ಆದ ಅಧಿಕಾರಿಗಳು ಇರಬೇಕೆಂದು ಬಿಜ್ಜಳ ಬಯಸಿದ್ದನೆಂದು ಭಾವಿಸುವುದು ಸರಿಯಾಗುತ್ತದೆ. ಬಸವಣ್ಣನವರ ಪ್ರಾಮಾಣಿಕತೆಯ ಬಗ್ಗೆ ಬಿಜ್ಜಳನಿಗೆ

ಏನಾದರೂ ಸಂದೇಹವಿದ್ದ ಪಕ್ಷದಲ್ಲಿ ಅವನು ಅವರನ್ನು ಉದ್ಯೋಗದಿಂದಲೇ ತೆಗೆದು ಹಾಕಿ ತಾನು ಹೆಚ್ಚು ವಿಶ್ವಾಸವಿರಿಸಿದ್ದಂತಹ ಇನ್ನಾರಿಗಾದರೂ ಆ ಹುದ್ದೆಯನ್ನು ವಹಿಸಬಹುದಾಗಿತ್ತು.

ಒಬ್ಬ ಅಧೀನ ಅಧಿಕಾರಿಯಾಗಿ ಬಸವಣ್ಣನವರು ಬಿಜ್ಜಳನಿಗೆ ಸಂಪೂರ್ಣ ನಿಷ್ಠರಾಗಿದ್ದರೆಂಬುದರ ಬಗ್ಗೆ ಪ್ರಶ್ನೆಗೆ ಆಸ್ಪದವೇ ಇಲ್ಲ. ಆದರೆ ಧರ್ಮದ ದೃಷ್ಟಿಯಿಂದ ಬಿಜ್ಜಳ 'ಭವಿ'ಯಾಗಿದ್ದ.[1] ಅಂತೆಯೇ 'ಭವಿ' ಸಕಲ ದುರ್ಗುಣಗಳ ಸಂಕೇತವಾಗಿತ್ತು. ಅಥವಾ ವೀರಶೈವೇತರನಾಗಿದ್ದ. ಬಸವಣ್ಣನವರು ಸಾಮಾಜಿಕ ಹಾಗೂ ಧಾರ್ಮಿಕ ಸುಧಾರಕರಾಗಿದ್ದರು. ಅನೇಕರು ತಮ್ಮ ಚಳವಳಿಗೆ ಸೇರಿ ಅದನ್ನು ಬಲಗೊಳಿಸಬೇಕೆಂದು ಅವರು ಕಾತರರಾಗಿದ್ದರು. ಭವಿಗಳ ಬಗ್ಗೆ ಅವರಿಗೆ ಹೆಚ್ಚು ಗೌರವಭಾವನೆಯಿದ್ದಿರಲಿಲ್ಲ. ಅವರ ಅನೇಕ ವಚನಗಳಿಂದ ಇದು ಸ್ಪಷ್ಟವಾಗುತ್ತದೆ. ತಮಗೆ ಅತ್ಯಂತ ಕಡಿಮೆ ಗೌರವವಿದ್ದಂಥ ಒಬ್ಬ ಉನ್ನತಾಧಿಕಾರಿಯ ಕೈಕೆಳಗೆ ನಿಷ್ಠ ನೌಕರರಾಗಿ ಬಸವಣ್ಣನವರಿದ್ದರು ಎಂಬ ಬಗ್ಗೆ ಅನುಮಾನ ಉಂಟಾಗಬಹುದು. ಬಸವಣ್ಣನವರೂ ಈ ಸಂಘರ್ಷದಲ್ಲಿ ತೊಳಲುತ್ತಿದ್ದರು. ಈ ಸಂಘರ್ಷದ ಸ್ಪಷ್ಟ ಚಿತ್ರಣ ಅವರ ಅನೇಕ ವಚನಗಳಲ್ಲಿದೆ. ಬಿಜ್ಜಳನಂಥ ಭವಿಯ ಸೇವೆ ಮಾಡುತ್ತಿದ್ದ ಬಸವಣ್ಣನವರ ಸಂಗಡಿಗರೇ ಒಂದು ದಿನ ಅವರನ್ನು ಪ್ರಶ್ನಿಸಿದರು. ಮತ್ತು ಟೀಕೆ ಮಾಡಿದರು. ಬಸವಣ್ಣನವರು ತಮ್ಮನ್ನು ಟೀಕಿಸಿದವರಿಗೆ ಕೆಳಗಿನ ವಚನಗಳಲ್ಲಿ ಉತ್ತರ ನೀಡಿದ್ದಾರೆ.

ಹೊತ್ತಾರೆ ಎದ್ದು ಕಣ್ಣ ಹೊಸೆಯುತ್ತಾ  
'ಎನ್ನೊಡಲಿಂಗೆ, ಎನ್ನೊಡವೆಗೆ, ಎನ್ನ ಮಡದಿಮಕ್ಕಳಿಗೆಂ'ದು  
ಕುದಿದೆನಾದರೆ ಎನ್ನ ಮನಕ್ಕೆ ಮನವೇ ಸಾಕ್ಷಿ!  
'ಅಶನೇ ಶಯನೇ ಯಾನೇ' ಸಂಪರ್ಕೇ ಸಹಭೋಜನೇ  
ಸಂಚರಂತಿ ಮಹಾಘೋರೇ ನರಕೇಕಾಲಮಕ್ಷಯಂ'  
ಎಂಬ ಶ್ರುತಿಯ 'ಬಸವಣ್ಣನೋದುವನು'ಎಂಬರು.  
'ಭವಿಬಿಜ್ಜಳನ ಗದ್ದುಗೆಯ ಕೆಳಗೆ ಕುಳ್ಳಿರ್ದು  
ಓಲೈಸಿಹನೆ'ಂದು ನುಡಿವರಯ್ಯಾ ಪ್ರಮಥರು.  
ಕೊಡುವೆನುತ್ತರವನವರಿಗೆ, ಕೊಡಲ (ಮ್ಮವೆ);

---

1. ಮತ್ತೊಮ್ಮೆ ಜನಿಸುವವನು 'ಭವಿ', ಈ ಜನ್ಮದಲ್ಲೇ ಮುಕ್ತಿ ಸಾಧಿಸುವವನು 'ಭಕ್ತ'. ಹನ್ನೆರಡನೇ ಶತಮಾನದ ವೀರಶೈವ ಮುಖಂಡರು ಮಾನವ ಜನಾಂಗವನ್ನು ಎರಡು ವಿಧವಾಗಿ ವಿಂಗಡಿಸಿದ್ದಾರೆ - 'ಭಕ್ತ'ರ ಗುಂಪು ಮತ್ತು 'ಭವಿ'ಗಳ ಗುಂಪು. ಬಸವಣ್ಣನವರಿಗೆ ಮತ್ತು ಇತರರಿಗೆ ವೀರಶೈವ ಧರ್ಮ ಸಕಲ ಸದ್ಗುಣಗಳ ಸಂಕೇತವಾಗಿತ್ತು.

ಹೊಲೆಯ ಹೊಲೆಯರ ಮನೆಯ ಹೊಕ್ಕು,
ಸಲೆ ಕೈಕೂಲಿಯ ಮಾಡಿಯಾದರೆಯೂ
ನಿಮ್ಮ ನಿಲವಿಂಗೆ ಕುದಿವೆನಲ್ಲದೆ,
ಎನ್ನೊಡಲವಸರಕ್ಕೆ ಕುದಿದೆನಾದರೆ
ತಲೆದಂಡ! ಕೂಡಲಸಂಗಮದೇವಾ.

ಬಸವಣ್ಣನವರು ಬಿಜ್ಜಳನ ಕೈಕೆಳಗಿನ ನೌಕರಿಯನ್ನು ತಮಗಾಗಿ ಅಲ್ಲ; ಬದಲಾಗಿ ತಮ್ಮ ಧರ್ಮ ಹಾಗೂ ಸಮಾಜಗಳಿಗಾಗಿ, ವಹಿಸಿಕೊಂಡರೆಂಬುದನ್ನು ಈ ವಚನ ಸ್ಪಷ್ಟವಾಗಿ ತೋರಿಸುತ್ತದೆ. ಬಸವಣ್ಣನವರ ಸ್ಥಾನ ಅವರನ್ನೊಬ್ಬ ಪ್ರಮುಖ ವ್ಯಕ್ತಿಯನ್ನಾಗಿ ಮಾಡಿತ್ತು. ಅವರ ಚಳವಳಿಯಲ್ಲಿ ಸಹಾಯ ಮಾಡಬಲ್ಲುದಾಗಿದ್ದ ಈ ಸ್ಥಾನವೇ ಅವರಿಗೆ ನಿಜವಾಗಿ ಸಹಾಯ ಮಾಡಿತ್ತು. ಅವರಿಗೆ ಒಳ್ಳೆಯ ಸಂಬಳ ಬರುತ್ತಿತ್ತು; ಸಂಸಾರವೂ ಚಿಕ್ಕದಾಗಿತ್ತು.'ಮಳೆಯ ದಿನ'ಕ್ಕಾಗಿ ಏನಾದರೂ ಉಳಿತಾಯ ಮಾಡಬೇಕೆಂಬ ವಿಚಾರಕ್ಕೆ ಅವರು ಸ್ಪಷ್ಟವಾಗಿ ವಿರೋಧ ಸೂಚಿಸಿದ್ದರು. ತಮ್ಮ ಸಂಪೂರ್ಣ ಆದಾಯವನ್ನೂ ಧಾರ್ಮಿಕ ಉದ್ದೇಶಗಳಿಗಾಗಿಯೇ ವಿನಿಯೋಗಿಸಲು ಅವರು ಸಮರ್ಥರಾಗಿ ಇದ್ದರು. ಹಿಂದೆಯೇ ಹೇಳಿದಂತೆ ಅವರ ಮನೆಯೇ ಒಂದು ಅನ್ನಛತ್ರ ಆಗಿತ್ತು.

ಪ್ರಾರಂಭದಲ್ಲಿ ಬಸವಣ್ಣನವರು ಹಾಗೂ ಬಿಜ್ಜಳನ ನಡುವೆ ವ್ಯವಹಾರಗಳು ಚೆನ್ನಾಗಿಯೇ ಸಾಗಿದುವು. ಬಸವಣ್ಣನವರ ಸಾಮಾಜಿಕ ಕ್ರಾಂತಿ ವೇಗ ಪಡೆದು ತುಂಬ ಜನಪ್ರಿಯತೆ ಗಳಿಸಿತು. ಅವರ ಬೋಧನೆಗಳಲ್ಲಿ ಕೆಲವು ವರ್ಣ ಪದ್ಧತಿಗೆ ವಿರೋಧವಾಗಿದ್ದುವು. ಮತ್ತು ಸ್ಪಷ್ಟವಾಗಿಯೂ ಇವರದು ಸಾಂಪ್ರದಾಯಿಕ ಧರ್ಮದ ವಿರುದ್ಧವಾದ ಕ್ರಾಂತಿಯಾಗಿತ್ತು. ಜನರು ಅನೇಕ ಸಂಖ್ಯೆಯಲ್ಲಿ ವೀರಶೈವ ಧರ್ಮಕ್ಕೆ ಮತಾಂತರ ಹೊಂದಿದ್ದರು. ಹೀಗೆ ಮತಾಂತರ ಹೊಂದಿದವರಿಗೆ, ತಮ್ಮ ಸ್ವಂತಿಕೆಯ ಬಗ್ಗೆ ಜಾಗ್ರತರಾಗಿರಬೇಕೆಂದೂ ಇತರರಿಗಿಂತ ತಾವು ಕೆಳಗಿನವರೆಂದು ಭಾವಿಸಬಾರದೆಂದೂ ಬಸವಣ್ಣನವರು ಬೋಧಿಸಿದರು. ಮಡಿವಾಳ ಮಾಚಯ್ಯ ಹಾಗೂ ಉಚ್ಚ ಜಾತಿಗಳಿಗೆ ಸೇರಿದ ಜನರಿಗೆ ಯುಕ್ತ ಗೌರವ ತೋರಿಸದೆ ನಗರದಲ್ಲಿ ಓಡಾಡಿದ ಅಸ್ಪೃಶ್ಯ ಶಿವನಾಗಿಮಯ್ಯ- ಇವರ ವಿಚಾರವನ್ನೂ ನಾವು ಓದಿದ್ದೇವೆ. ಮೇಲ್ವರ್ಗದ ಜನರ ಬಟ್ಟೆಗಳನ್ನು ಒಗೆಯಲು ಮಾಚಯ್ಯ ಒಪ್ಪಲಿಲ್ಲ. ತಾವು ಊರಿಗೆ ಬರುವುದನ್ನು ಸಾರಿ ಹೇಳುವ ಸಂಪ್ರದಾಯವನ್ನು ಶಿವನಾಗಿಮಯ್ಯ ಪಾಲಿಸಲಿಲ್ಲ. ಇವೆಲ್ಲಕ್ಕೂ ಬಸವಣ್ಣನವರು ಹಾಗೂ ಅವರ ಚಿತಾವಣೆಯೇ ಕಾರಣವೆಂದು ಸಂಪ್ರದಾಯವಾದಿಗಳು ಭಾವಿಸಿದರು. ಬಸವಣ್ಣನವರ ಕ್ರಾಂತಿ ಇತರ ಧರ್ಮಗಳವರಿಗೆ ತುಂಬ ಭಯವನ್ನು ಉಂಟುಮಾಡಿತು. ಅನೇಕ ಸಂಖ್ಯೆಯ ಅನುಯಾಯಿಗಳನ್ನು ಸಂಪಾದಿಸಿದ ಕಾಲದಲ್ಲಿಯೇ ಬಸವಣ್ಣ

ನವರು ಕೆಲವು ಶತ್ರುಗಳನ್ನೂ ಗಳಿಸಿದ್ದರೆಂಬುದು ನಿಜ. ಈ ಶತ್ರುಗಳಲ್ಲಿ ಪ್ರಭಾವಿಗಳಾದ ಕೆಲವು ಶೈವ ಹಾಗೂ ವೈಷ್ಣವ ಬ್ರಾಹ್ಮಣರೂ, ಜೈನರೂ ಮತ್ತು ಕೆಲವು ಪ್ರಮುಖ ಅಧಿಕಾರಿಗಳೂ ಸೇರಿದ್ದರು. ಈ ಅಧಿಕಾರಿಗಳಲ್ಲಿ ಕೆಲವರ ಹೆಸರುಗಳ ಒಂದು ಪಟ್ಟಿ 'ಬಸವಪುರಾಣ' ದಲ್ಲಿದೆ. ಬಿಜ್ಜಳನಿಗೆ ಆಡಳಿತದಲ್ಲಿ ಲೆಕ್ಕಪತ್ರ ಸಹಾಯ ಮಾಡುತ್ತಿದ್ದ ಮುಖ್ಯ ವ್ಯಕ್ತಿಗಳೆಂದು ಇವರಲ್ಲಿ ಅನೇಕರನ್ನು ಶಾಸನಗಳಲ್ಲಿ ಬಣ್ಣಿಸಿರುವುದನ್ನು ಗಮನಿಸುವುದು ಸ್ವಾರಸ್ಯಕರ ವಾಗಿದೆ. ಉದಾಹರಣೆಗೆ, ಕಸಪಯ್ಯ ಅಥವಾ ಕಸಪಿಮಂತ್ರಿ ಎಂಬುವನು ಕ್ರಿ.ಶ.1163 ರಲ್ಲಿ ಬನವಾಸಿ ಪ್ರಾಂತವನ್ನು ಆಳುತ್ತಿದ್ದ ಹಾಗೂ ಬಿಜ್ಜಳನಿಗೆ ಬೆಂಬಲ ನೀಡಿದವರಲ್ಲಿ ಇವನೂ ಒಬ್ಬನಾಗಿದ್ದ. ಕರಿಯ ಕೇಸಿಮಯ್ಯನ ಹೆಸರೂ ಶಾಸನಗಳಲ್ಲಿ ದಾಖಲಾಗಿದೆ. ಕಸಪಯ್ಯನ ಕೈ ಕೆಳಗೆ ಕೆಲಸ ಮಾಡುತ್ತಿದ್ದ ಇನ್ನೊಬ್ಬ ಅಧಿಕಾರಿಯೇ ಬರ್ಮರಸ. ಇವನು ಸ್ವತಃ ಬಿಜ್ಜಳನ ಅಳಿಯನೇ ಆಗಿದ್ದ.

ಬಸವಣ್ಣನವರು ರಾಜ್ಯದ ಬೊಕ್ಕಸದಿಂದ ತಮ್ಮವರಿಗಾಗಿ ಅಧಿಕ ಮೊತ್ತದ ಹಣವನ್ನು ವೆಚ್ಚಮಾಡುತ್ತಿದ್ದಾರೆಂದು ಈ ಮುಖಂಡರೂ ಅಧಿಕಾರಿಗಳೂ ಬಿಜ್ಜಳನಿಗೆ ದೂರು ಹೇಳಿದರು. ಈ ಆಪಾದನೆಗಳು ಶುದ್ಧ ಕಾಲ್ಪನಿಕವೇ ಅಥವಾ ಇವುಗಳಲ್ಲಿ ಸತ್ಯಾಂಶವಿತ್ತೇ ಎಂದು ಹೇಳಲು ನಮಗೆ ಸಾಧ್ಯವಿಲ್ಲ. ವೀರಶೈವ ಸಾಹಿತ್ಯದಲ್ಲಿ ದಾಖಲಾದ ಎಲ್ಲ ಕಥೆಗಳೂ ಬಸವಣ್ಣನವರು ರಾಜ್ಯದ ಬೊಕ್ಕಸದಿಂದ ಹಣ, ಆಭರಣಗಳು ಹಾಗೂ ವಸ್ತ್ರಗಳನ್ನು ತೆಗೆದುಕೊಂಡು ಅವುಗಳನ್ನು ಜಂಗಮರಿಗೆ ಹಂಚಿದರೆಂದು ಹೇಳುತ್ತವೆ. ಲೇಖಕರು ಕಥೆಗಳ ನ್ನಷ್ಟೇ ನಿರೂಪಿಸಲಿಲ್ಲ. ಬದಲಾಗಿ ಬಸವಣ್ಣನವರ ಕೆಲಸಗಳನ್ನು ಅತ್ಯಂತ ಮಹತ್ವದ್ದೆಂದು ವರ್ಣಿಸಿದರು. ಈ ಕಥೆಗಳ ಅನುಸಾರವಾಗಿ ಬೊಕ್ಕಸಕ್ಕೆ ಸೇರಿದ ಸಂಪತ್ತು ದೇವರಿಗೆ ಸೇರಿದ್ದು ಆದ್ದರಿಂದ ಅವು ಭಕ್ತರಿಗೆ ಸೇರ ಬೇಕು ಎಂದು ಬಸವಣ್ಣನವರು ತಿಳಿದುಕೊಂಡಿದ್ದರು. ಸಂಪತ್ತಿನ ದುರುಪ ಯೋಗವೇನಾದರೂ ಆಗಿದೆಯೇ ಎಂದು ಪರೀಕ್ಷಿಸಲು ಬಿಜ್ಜಳ ಬಯಸಿದ. ಈ ಬಗ್ಗೆ ವಿಚಾರಣೆ ನಡೆಸಲು ಒಂದು ಆದೇಶವನ್ನೂ ಹೊರಡಿಸಿದ. ಆದರೆ ಲೆಕ್ಕ ಪತ್ರಗಳನ್ನು ಪರಿಶೀಲಿಸಿದಾಗ, ಅವು ಸಂಪೂರ್ಣ ಸರಿಯಾಗಿರುವುದು ಕಂಡು ಬಂತು. ಆದರೆ ಕಥೆಗಳು ಇಲ್ಲಿಗೇ ಕೊನೆಗೊಳ್ಳುವುದಿಲ್ಲ. ಕೂಡಲ ಸಂಗಮ ದೇವನ ಅನುಗ್ರಹದಿಂದ ಪವಾಡವೋ ಎಂಬ ಹಾಗೆ ಬೊಕ್ಕಸದಲ್ಲಿ ಇರಬೇಕಾದುದಕ್ಕಿಂತ ಹೆಚ್ಚು ಮೊತ್ತದ ಹಣ ಕಂಡುಬಂತೆಂದೂ, ಲೆಕ್ಕಪತ್ರಗಳನ್ನೂ ನೋಡಿಕೊಳ್ಳುವ ಅಧಿಕಾರಿಗಳಿಗೆ ಅದನ್ನು ಎಣಿಸಲು ಕೂಡ ಸಾಧ್ಯವಾಗಲಿಲ್ಲ ಎಂದೂ ಕಥೆಗಳು ತಿಳಿಸುತ್ತವೆ. ಇದು ನಿಜವೇ ಆಗಿದ್ದ ಪಕ್ಷ ದಲ್ಲಿ, ಬಸವಣ್ಣನವರು ಇನ್ನಷ್ಟು ಹಣವನ್ನು ದುರುಪಯೋಗಪಡಿಸಿಕೊಳ್ಳು ವಂತೆ ಬಿಜ್ಜಳನೇ ಸಂತೋಷದಿಂದ ಅವರಿಗೆ ಉತ್ತೇಜನ ನೀಡುತ್ತಿದ್ದ.

ಈ ಆಪಾದನೆಗಳನ್ನು ಕುರಿತಂತೆ ಸ್ವತಃ ಬಸವಣ್ಣನವರ ವಚನಗಳಲ್ಲಿಯೇ ಕೆಲವು ಉಲ್ಲೇಖಗಳಿವೆ. ಇಂಥ ಆಪಾದನೆಗಳನ್ನೆಲ್ಲ ಅವರ ವಿರೋಧಿಗಳು ಸುಮ್ಮನೆ ಮಾಡಿದುದೆಂದೂ ಈ ಉಲ್ಲೇಖಗಳು ದೃಢಪಡಿಸುತ್ತವೆ. ಈ ಆಪಾದನೆಗಳು ನಿರಾಧಾರವಾದುವೆಂದು ಬಸವಣ್ಣನವರು ತಳ್ಳಿಹಾಕಿದರು. 'ಬಿಜ್ಜಳನ ಭಂಡಾರವೆನಗೇಕಯ್ಯ?' ಎಂದು ಅವರು ಪ್ರಶ್ನಿಸಿದರು. ಆದರೆ ಯಾರೂ ತಮ್ಮಲ್ಲಿ ಯಾವುದೇ ದಾನವನ್ನು ಕೇಳದೇ ಇದ್ದಾಗ, ತಾವು ದರಿದ್ರರೆಂಬ ಭಾವನೆ ತಮಗೆ ಉಂಟಾಗುತ್ತದೆಂದೂ, ಯಾರಾದರೂ ಕೇಳಿದ ಪಕ್ಷದಲ್ಲಿ ಬೊಕ್ಕಸವನ್ನೂ ನೀಡಲು ತಾವು ಸಿದ್ಧರೆಂದೂ ಅವರು ತಮ್ಮ ಇನ್ನೊಂದು ವಚನದಲ್ಲಿ ತಿಳಿಸಿದ್ದಾರೆ. ರಾಜ್ಯದ ಸಂಪತ್ತಿನ ಒಂದು ಭಾಗವನ್ನು ಮಾತ್ರ ಧಾರ್ಮಿಕ ಉದ್ದೇಶಗಳಿಗಾಗಿ ಬಸವಣ್ಣನವರು ಬಳಸಿಕೊಂಡಿರಬಹುದಾದ ಸಾಧ್ಯತೆಯಿದೆ.

ಬಸವಣ್ಣನವರು ಉತ್ತರ ನೀಡಲೇಬೇಕಾದ ಇತರ ಹಲವು ಗಂಭೀರ ಆಪಾದನೆಗಳೂ ಇದ್ದುವು. ಈ ರೀತಿ ಪ್ರಾರಂಭವಾದ ಬಿರುಕು ಅಗಲವಾಗುತ್ತಾ ಹೋಯಿತು. ಅವರನ್ನು ಕುರಿತಂತೆ ಇನ್ನೂ ಕೆಲವು ಆಪಾದನೆಗಳಿದ್ದುವು. ಅವುಗಳಲ್ಲಿ ಹಲವು ಅವಿವೇಕದಿಂದ ಕೂಡಿದಂಥವೂ ಹಾಸ್ಯಾಸ್ಪದವಾದುವೂ ಆಗಿದ್ದುವು. ಉದಾಹರಣೆಗೆ, ಬಸವಣ್ಣನವರು ತಲೆಬಾಗಿ ಗೌರವ ನೀಡಿದಾಗಲೆಲ್ಲ ಅದು ಸಿಂಹಾಸನಕ್ಕಾಗಲಿ, ರಾಜನಿಗಾಗಲಿ ಅಲ್ಲದೆ, ತಮ್ಮ ಉಂಗುರದ ಮೇಲೆ ಕೆತ್ತಲಾಗಿದ್ದಂತಹ ನಂದಿಯ ಚಿತ್ರಕ್ಕಾಗಿ ಇರುತ್ತಿತ್ತು ಎಂಬೊಂದು ಆಪಾದನೆಯೂ ಇತ್ತು. ಈ ಆಪಾದನೆಗಳನ್ನು ಗಂಭೀರವಾಗಿ ತೆಗೆದುಕೊಂಡ ಬಿಜ್ಜಳ ಅನೇಕ ಸಂದರ್ಭಗಳಲ್ಲಿ ಬಸವಣ್ಣನವರನ್ನು ಪರೀಕ್ಷೆಗೆ ಒಳಪಡಿಸಿರುವ ಸಾಧ್ಯತೆಯಿದೆ.

ಬಿಜ್ಜಳ ಸಾಂಪ್ರದಾಯಿಕ ಶೈವಧರ್ಮದ ಅನುಯಾಯಿಯಾಗಿದ್ದ. ತಾನು ಸಿಂಹಾಸನವನ್ನೇರಿದುದು ನ್ಯಾಯ ವಿರುದ್ಧ ಮಾರ್ಗದಿಂದ ಎಂಬ ವಾಸ್ತವ ಸಂಗತಿ ಅವನಿಗೆ ಸಂಪೂರ್ಣವಾಗಿ ತಿಳಿದಿತ್ತು. ಅಷ್ಟೇನೂ ನಿಷ್ಠರಲ್ಲದ ಅಧಿಕಾರಿಗಳ ಪ್ರತಿಯೊಂದು ಚಲನವಲನದಲ್ಲಿಯೂ ಅವನಿಗೆ ಅಪಾಯದ ಅನಿಸಿಕೆ ಉಂಟಾಗುತ್ತಿತ್ತು. ಯಾವುದೇ ಸಾಮಾಜಿಕ ಬದಲಾವಣೆಯನ್ನು ಉಂಟು ಮಾಡಲು ಅವನು ಸಿದ್ಧನಿರಲಿಲ್ಲ. ಎಲ್ಲಕ್ಕಿಂತ ಮಿಗಿಲಾಗಿ ಹಳೆಯ ವ್ಯವಸ್ಥೆಯೇ ಮುಂದುವರಿಯಬೇಕೆಂಬುದು ಬಿಜ್ಜಳನ ಅಪೇಕ್ಷೆ ಆಗಿತ್ತು. ಸಾಂಪ್ರದಾಯಿಕ ಮನೋಭಾವದ ಜನರನ್ನು ಅಸಂತೋಷಗೊಳಿಸಲು ಕೂಡ ಅವನು ಸಿದ್ಧನಾಗಿರಲಿಲ್ಲ. ಏಕೆಂದರೆ ಅಂಥವರೇ ಅಧಿಕ ಸಂಖ್ಯಾತರೂ ಪ್ರಭಾವಿಗಳೂ ಆಗಿದ್ದರು, ಬಸವಣ್ಣನವರನ್ನು ಕೆಲಸದಿಂದ ತೆಗೆದು ಹಾಕುವ ಉದ್ದೇಶವೂ ಬಿಜ್ಜಳನಿಗಿರಲಿಲ್ಲ. ಏಕೆಂದರೆ ಮೊತ್ತ ಮೊದಲನೆಯದಾಗಿ, ತನ್ನ ಸ್ಥಾನಕ್ಕೆ ಬಾಧಕವಾದ ಯಾವುದಾದರೂ ಉದ್ದೇಶ ಬಸವಣ್ಣನವರಿಗೆ

ಇದ್ದಿತೆಂಬುದರ ಬಗ್ಗೆ ಯಾವುದೇ ಸಾಕ್ಷ್ಯಾಧಾರವಿರಲಿಲ್ಲ. ಎರಡನೆಯದಾಗಿ, ಬಸವಣ್ಣನವರಿಗೆ ಅನೇಕ ಅನುಯಾಯಿಗಳಿದ್ದರು. ಇದೂ ಪರಿಗಣಿಸಬೇಕಾದ ವಿಚಾರವೇ ಆಗಿತ್ತು. ಆದರೂ ದಿನಗರುಳಿದಂತೆ ಬಿಜ್ಜಳ ಹಾಗೂ ಬಸವಣ್ಣ ನವರ ನಡುವೆ ಘರ್ಷಣೆಗಳು ಉಂಟಾಗತೊಡಗಿದುವು. ಬಸವಣ್ಣ ನವರನ್ನು ಕೆಲಸದಿಂದ ತೆಗೆದು ಬಿಡುವುದಾಗಿ ಬಿಜ್ಜಳ ಬೆದರಿಸಿದ. ಆದರೆ ಆ ಬಗ್ಗೆ ತಾವು ಅಂಜುವುದಿಲ್ಲವೆಂದು ಬಸವಣ್ಣನವರು ಶಾಂತವಾಗಿಯೇ ಉತ್ತರಿಸಿ ದರು. ಕಥೆಗಳನ್ನು ನಂಬುವುದಾದರೆ, ಬಸವಣ್ಣನವರನ್ನು ಒಮ್ಮೆ ಕೆಲಸದಿಂದ ತೆಗೆದು ಹಾಕಲಾಗಿತ್ತು. ಮತ್ತು ಬಿಜ್ಜಳನ ಕ್ಷಮೆ ಯಾಚಿಸಿದ ತರುವಾಯ ಮಾತ್ರ ಆವರಿಗೆ ಪುನಃ ತಮ್ಮ ಉದ್ಯೋಗ ಲಭಿಸಿತ್ತು.

ಅಧಿಕಾರಕ್ಕೆ ಸಂಬಂಧಿಸಿದ ಕೆಲಸಗಳನ್ನಷ್ಟೇ ಅಲ್ಲದೆ ಇತರ ಕೆಲವು ಸಾಮಾಜಿಕ ಕರ್ತವ್ಯಗಳನ್ನೂ ಬಸವಣ್ಣನವರು ನಿರ್ವಹಿಸಬೇಕಾಗಿತ್ತು. ಇವುಗಳಿ ಗಾಗಿ ಅವರ ಹೆಚ್ಚಿನ ಸಮಯ ವ್ಯಯವಾಗುತ್ತಿತ್ತು. ದೇವರನ್ನು ಕುರಿತ ಚಿಂತನೆಗೆ ತಮಗೆ ಸಾಕಷ್ಟು ಸಮಯ ಸಿಗುತ್ತಿಲ್ಲ ಎಂಬ ಗಂಭೀರ ಅನಿಸಿಕೆಯೂ ಅವರಿಗೆ ಕೆಲವು ಬಾರಿ ಉಂಟಾಗುತ್ತಿತ್ತು.

ಉದಯಾಸ್ತಮಾನವೆನ್ನ ಬೆಂದ ಬಸುರಿಂಗೆ ಕುದಿಯಲಲ್ಲದೆ,
ನಿಮ್ಮ ನೆನೆಯಲು ತೆಲುಹಿಲ್ಲಯ್ಯಾ!
ಎಂತೋ! ಲಿಂಗ ತಂದೆ, ಎಂತಯ್ಯಾ? ಎನ್ನ ಪೂರ್ವಲಿಖಿತ!
ಬೆರಣಿಯನಾಯಲಲ್ಲದೆ ಅಟ್ಟುಣ್ಣ ತೆರಹಿಲ್ಲವೆನಗೆ!
ನೀಕರುಣಿಸಾ, ಕೂಡಲಸಂಗಮದೇವಾ!

ಆದರೆ ತಾವೇನನ್ನೇ ಮಾಡಲಿ, ಅದು ಸಮಾಜದ ಏಳ್ಗೆಗಾಗಿ ಎಂಬ ಸಮಾ ಧಾನ ಬಸವಣ್ಣನವರಿಗಿತ್ತು.

ಬಸವಣ್ಣನವರು ಧಾರ್ಮಿಕ ವ್ಯಕ್ತಿಯಾಗಿದ್ದರು; ಸ್ವಭಾವತಃ ಭಕ್ತರೂ ಆಗಿ ದ್ದರು. ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳುವುದೇ ಅವರ ಧ್ಯೇಯವಾಗಿತ್ತು. ಆದರೆ ಅವರೆಂದೂ ಆಧ್ಯಾತ್ಮಿಕ ಧ್ಯೇಯ ಸಾಧನೆಗಾಗಿ ಐಹಿಕ ಕಾರ್ಯಗಳನ್ನು ಬಿಟ್ಟುಬಿಟ್ಟಿರಲಿಲ್ಲ. ಇಹಲೋಕದ ಎಲ್ಲ ಸಂಕ್ಷೋಭೆ ಹಾಗೂ ಸಮಸ್ಯೆಗ ಳೊಂದಿಗೆ ಅವರು ಜೀವನ ಸಾಗಿಸಿದರು. ಹಾಗೂ ಅವೆಲ್ಲವನ್ನೂ ಶಾಂತ ವಾಗಿಯೇ ಎದುರಿಸಿದರು. 'ಕಷ್ಟಗಳನ್ನು ಕಂಡ' ವ್ಯಕ್ತಿಯೆಂದು ಬಸವಣ್ಣನ ವರನ್ನು ಅವರ ಪತ್ನಿ ನೀಲಲೋಚನೆ ವರ್ಣಿಸಿದ್ದಾಳೆ. ಅವರು ಎದುರಿಸಿದ ಹಲವಾರು ಸಮಸ್ಯೆಗಳು ಅವರನ್ನು ಕಷ್ಟಸಹಿಷ್ಣುವಾದ ಹೋರಾಟಗಾರರನ್ನಾ ಗಿಯೂ ಚಾಣಾಕ್ಷರನ್ನಾಗಿಯೂ ಮಾಡಿದ್ದುವು. ಇಹಲೋಕವೂ, ಅದು ನೀಡಿದ್ದ ಸುಖಸಂತೋಷಗಳೂ ಅವರ ದೃಷ್ಟಿಯಲ್ಲಿ ನೈಜವಾಗಿ ಇದ್ದುವು. ಇಲ್ಲಿ ಸಜ್ಜೀವನ ನಡೆಸಿದ ವ್ಯಕ್ತಿ ಪರಲೋಕದಲ್ಲಿಯೂ ದೇವರಿಂದ ಸ್ವೀಕೃತ ನಾಗುತ್ತಾನೆ ಎಂದು ಅವರು ನಂಬಿದ್ದರು. ಅವರು ಹೀಗೆಂದಿದ್ದಾರೆ.

ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ;
ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯಾ;
ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯಾ
ಕೂಡಲಸಂಗಮದೇವಾ

ಈ ದರ್ಶನವೇ ಬಸವಣ್ಣನವರನ್ನು ಇಹಲೋಕಕ್ಕೆ ಬಂಧಿಸಿತ್ತು; ಅವರು ವ್ಯತ್ತಿಯೊಂದನ್ನು ಕೈಗೊಳ್ಳುವಂತೆ ಮಾಡಿತ್ತು ಹಾಗೂ ಮಹಾ ಸಾಮಾಜಿಕ ಕ್ರಾಂತಿಯೊಂದರ ನಾಯಕರನ್ನಾಗಿಯೂ ಮಾಡಿತ್ತು.

# 6. ಕ್ರಾಂತಿಕಾರಕ ಹಾಗೂ ಸುಧಾರಕ

ಆಗಿನ ಸಾಮಾಜಿಕ ಹಾಗೂ ಧಾರ್ಮಿಕ ಸ್ಥಿತಿಗತಿಗಳಿಗೆ ಸಂಬಂಧಿಸಿದ ಅತೃಪ್ತಿ ಜನ ಸಾಮಾನ್ಯರಲ್ಲಿ ಬಹುಕಾಲದಿಂದ ಸಂಚಯಗೊಂಡಿತ್ತು. ಬಸವಣ್ಣನವರ ಕ್ರಾಂತಿಕಾರಕ ಆಲೋಚನೆಗಳಿಗೆ ಇದೇ ಮೂಲ ಕಾರಣವಾಗಿತ್ತು. ಇದರಿಂದಾಗಿ ಹೀಗಾಗಿ ಅವರ ತತ್ವಗಳನ್ನು ಅನುಸರಿಸಿದವರ ಪೈಕಿ ಬಡವರೇ ಅಧಿಕ ಸಂಖ್ಯೆಯಲ್ಲಿದ್ದುದು ಆಶ್ಚರ್ಯ ಸಂಗತಿ ಏನಲ್ಲ. ಚೆನ್ನಾಗಿ ಬೇರೂರಿದ್ದ ಧಾರ್ಮಿಕ ಹಾಗೂ ಸಾಮಾಜಿಕ ಸಂಘಟನೆಗಳು ಬಸವಣ್ಣನವರನ್ನು ವಿರೋಧಿಸಿದುವು ಮತ್ತು ಅವರ ಕ್ರಾಂತಿಯನ್ನು ಮೊಳಕೆಯಲ್ಲಿಯೇ ಚಿವುಟಿ ಹಾಕಲು ಪ್ರಯತ್ನಿಸಿದುವು. ಯಾರು ಬೇಕಾದರೂ ತಮ್ಮ ಧರ್ಮವನ್ನು ಸ್ವೀಕರಿಸಬಹುದೆಂದೂ ಹೀಗೆ ಸ್ವೀಕರಿಸುವವರ ನಡುವೆ ಯಾವುದೇ ಭೇದವನ್ನು ತಾವು ತೋರಿಸುವುದಿಲ್ಲವೆಂದೂ ಘೋಷಿಸಿದುದು ಬಸವಣ್ಣನವರು ಮಾಡಿದ ಮೊತ್ತ ಮೊದಲ ಕೆಲಸವಾಗಿತ್ತು. ಅವರು ಬೋಧಿಸಿದ ಧರ್ಮ ಹಾಗೂ ಅದನ್ನು ಬೋಧಿಸಿದ ವಿಧಾನ-ಇವೆರಡೂ ಸರಳವೂ ಮನಸ್ಸಿಗೆ ಹಿತಕರವೂ ಆಗಿದ್ದುವು.

ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ,
ಮುನಿಯಬೇಡ, ಅನ್ಯರಿಗೆ ಅಸಹ್ಯ ಪಡಬೇಡ; ತನ್ನ ಬಣ್ಣಿಸಬೇಡ,
ಇದಿರ ಹಳಿಯಲು ಬೇಡ,
ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ,
ಇದೇ ನಮ್ಮ ಕೂಡಲಸಂಗಮ ದೇವರನೊಲಿಸುವ ಪರಿ!

ಸಂಸಾರವೆಂಬುದೊಂದು ಗಾಳಿಯ ಸೊಡರು,
ಸಿರಿಯೆಂಬುದೊಂದು ಸಂತೆಯ ಮಂದಿ, ಕಂಡಯ್ಯಾ!
ಇದ ನೆಚ್ಚಿ ಕೆಡಬೇಡ - ಸಿರಿಯೆಂಬುದ!
ಮರೆಯದೆ ಪೂಜಿಸು ನಮ್ಮ ಕೂಡಲ ಸಂಗಮದೇವನ.

ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ, ಕಾಣಿ ಭೋ!
ಸತ್ಯವ ನುಡಿವುದೇ ದೇವಲೋಕ, ಮಿಥ್ಯವ ನುಡಿವುದೆ ಮರ್ತ್ಯಲೋಕ!
ಆಚಾರವೇ ಸ್ವರ್ಗ, ಅನಾಚಾರವೇ ನರಕ -
ಕೂಡಲ ಸಂಗಮದೇವಾ, ನೀವೇ ಪ್ರಮಾಣು!

ಧರ್ಮವೆಂಬುದು ವಿಶೇಷಾಧಿಕಾರಗಳುಳ್ಳವರಿಗೆ ಹಾಗೂ ಸುಶಿಕ್ಷಿತ ವರ್ಗಗಳ

ವರಿಗೇ ಪ್ರತ್ಯೇಕವಾಗಿರುವ ಕಟ್ಟುನಿಟ್ಟಾದ ಹಾಗೂ ವರ್ಗೀಕರಿಸಲಾದ' ಸಂಸ್ಕಾರಗಳ ಒಂದು ಸಮೂಹವೆಂಬ ಜನಪ್ರಿಯ ಪರಿಕಲ್ಪನೆಯನ್ನು ಬಸವಣ್ಣನವರು ಖಂಡಿಸಿದರು. ಧರ್ಮವೆಂದರೆ ಜೀವನದ ಮಾರ್ಗವೆಂದು ಅವರು ಸಾರಿದರು. ಒಳ್ಳೆಯತನ ಹಾಗೂ ಪ್ರಾಮಾಣಿಕತೆಗಳ ಬದುಕನ್ನು ಸಾಗಿಸುವುದೇ ಧರ್ಮದ ಮೂಲತತ್ವ. ಹಾಗೆಂದು ಬಾಹ್ಯ ಧಾರ್ಮಿಕ ಸಂಕೇತ ಗಳನ್ನೇನೂ ಅವರು ನಿರಾಕರಿಸಲಿಲ್ಲ. ಅವು ಗೌಣ ಸ್ಥಾನ ಪಡೆಯುವಂತೆ ಅವರು ಮಾಡಿದರು ಅಷ್ಟೇ! 'ಒಳ್ಳೆಯ ಜೀವನ'ವೆಂದರೆ ಏನು? ಎಂದು ಅವರು ತಮ್ಮ ವಚನಗಳಲ್ಲಿ ವಿವರಿಸಿದ್ದಾರೆ. ಒಳ್ಳೆಯ ಜೀವನ ನಡೆಸು ವುದೇ ಪರಮಾತ್ಮನನ್ನು ತಲುಪುವ ನಿಶ್ಚಿತ ಮಾರ್ಗವೆಂದೂ ಅವರು ತಿಳಿಸಿ ದ್ದಾರೆ. ಇತರರಂತೆ ತಾವು ಕೂಡ ಧರ್ಮವೊಂದಕ್ಕೆ ಸೇರಲು ಸಾಧ್ಯವೆಂಬು ದನ್ನು ಕೇಳಿಯೇ ಬಡವರು ನಿಜವಾಗಿ ಪುಳಕಗೊಂಡಿರಬೇಕು.

ಆದರೆ ಬಸವಣ್ಣನವರ ಬೋಧನೆಗಳು ಬಡವರನ್ನು ಮಾತ್ರ ಆಕರ್ಷಿಸಿದುವು ಎಂಬ ತೀರ್ಮಾನಕ್ಕೆ ನಾವು ಬರಬಾರದು. ಅನೇಕರು ಸಂಪೂರ್ಣ ಮನವರಿಕೆ ಮಾಡಿಕೊಂಡೇ ವೀರಶೈವ ಧರ್ಮವನ್ನು ಸ್ವೀಕರಿಸಿದ್ದರು. ಆದರೆ ಶ್ರದ್ಧೆ ಅಥವಾ ಮನವರಿಕೆಗಳಿಗೆ ಸಂಬಂಧ ಪಡದೆ ಇರುವ ಇತರ ಕಾರಣಗಳಿಗಾಗಿ ವೀರಶೈವ ಧರ್ಮಕ್ಕೆ ಸೇರಿದ ಇತರ ಕೆಲವರೂ ಇದ್ದರು. ಸ್ತ್ರೀಪುರುಷ ದೈವಗಳನ್ನು ಪೂಜಿಸುವ, ಬುಡಕಟ್ಟುಗಳಿಗೆ ಸೇರಿದ ಮುಗ್ಧ ಜನರೂ ಇವರಲ್ಲಿದ್ದರು. ಆ ದೈವಗಳನ್ನು ಕೈಬಿಟ್ಟು ಶಿವನನ್ನು ಪೂಜಿಸುವಂತೆ ಅವರನ್ನು ಕೇಳಿಕೊಳ್ಳಲಾಯಿತು. ನಿಸ್ಸಂದೇಹವಾಗಿ ಇದು ಫಲವನ್ನು ನೀಡಿತು. ಆದರೆ ತಮ್ಮ ಸಂಪ್ರದಾಯಗಳನ್ನು ಬಿಡದ ಅಥವಾ ಭರವಸೆ ಯಿಟ್ಟು ವೀರಶೈವ ಧರ್ಮವನ್ನೂ ಸ್ವೀಕರಿಸದ ಜನರೂ ಕೆಲವರಿದ್ದರು. ಬಸವಣ್ಣ ನವರೂ ಅವರ ಸಂಗಡಿಗರೂ ಇಂತಹ ಅನೇಕ ಸಮಸ್ಯೆಗಳನ್ನು ಎದುರಿಸ ಬೇಕಾಯಿತು. ಇಂಥ ಜನರಲ್ಲಿ ಕೆಲವರನ್ನು ಇಲ್ಲಿ ಉಲ್ಲೇಖಿಸಬೇಕಾಗಿದೆ. ಒಂದು ಸಂದರ್ಭವನ್ನು ಹೇಳುವುದಾದರೆ, ಗಂಡ ವೀರಶೈವನಾಗಿ ಮದ್ಯ, ಮಾಂಸಗಳನ್ನು ವರ್ಜಿಸಿದ; ಆದರೆ ಅವನ ಹೆಂಡತಿ ಮತಾಂತರ ಹೊಂದಲು ಒಪ್ಪಲಿಲ್ಲ. ಮದ್ಯ, ಮಾಂಸ ಹಾಗೂ ಗಾಂಜಾಗಳ ಸೇವನೆಯನ್ನು ಬಸವಣ್ಣ ನವರ ಧರ್ಮ ನಿಷೇಧಿಸಿತ್ತು. ಮತಾಂತರ ಹೊಂದಿದವರಲ್ಲಿ ಅನೇಕರಿಗೆ ತಮ್ಮ ಸಾಂಪ್ರದಾಯಿಕ ಆಹಾರಾಭ್ಯಾಸಗಳನ್ನು ಬಿಟ್ಟು ಬಿಡುವುದು ಕಷ್ಟ ವಾಗಿತ್ತು. ಆದ್ದರಿಂಧ ಅವರು ಬಸವಣ್ಣನವರ ಆದೇಶಗಳನ್ನು ಗೋಪ್ಯವಾಗಿ ಮುರಿದರು. ಬಸವಣ್ಣನವರ ಸೋದರ ಅಳಿಯನಾದ ಚನ್ನಬಸವ ಇಂಥ ಬೂಟಾಟಿಕೆಗಳನ್ನು ಬಲವಾಗಿ ಖಂಡಿಸಿದ. ಅವನು ದೃಢವಾಗಿ ಹೀಗೆ ಘೋಷಿಸಿದ: .... 'ತಾ ಹಿಂದೆ ಭವಿಯಾಗಿದ್ದಾಗ ಭುಂಜಿಸುವ ಸುರೆ, ಮಾಂಸ, ಭಂಗಿ, ಭವಿ ಸಂಗ, ಭವಿಪಾಶವ ಅರಿದು ಬಿಡದಿರ್ದವರುಗಳು

ಮತ್ತೆ ಆ ಬೆಕ್ಕು, ಆ ಸೂಕರ, ಆ ಸೊಣಗ, ಆ ಕೋಳಿಗಿಂದತ್ತತ್ತ ಕಡೆ ನೋಡಾ'!

ಪ್ರತಿಯೊಬ್ಬ ವೀರಶೈವನನ್ನೂ ತನ್ನ ಸರಿಸಮನಾಗಿ ಕಾಣಬೇಕೆಂದು ಹೊಸದಾಗಿ ವೀರಶೈವ ಧರ್ಮದೀಕ್ಷೆ ಪಡೆದವನಿಗೆ ಸಲಹೆ ನೀಡಲಾಗುತ್ತಿತ್ತು. ವೀರಶೈವನಾಗಿ ಪರಿವರ್ತನೆಗೊಂಡ 'ಭವಿ' ತನ್ನ ಹಿಂದಿನ ಧಾರ್ಮಿಕ ಸಂಬಂಧಗಳಿಂದ ದೂರವಾಗಿರಬೇಕು. ಅವನೆಂದೂ ಭವಿಗಳೊಂದಿಗೆ ಊಟ ಮಾಡಬಾರದೆಂದೂ ಅಥವಾ ಅವರೊಡನೆ ವಿವಾಹ ಸಂಬಂಧ ಬೆಳೆಸಬಾರ ದೆಂದೂ ಗೊತ್ತುಪಡಿಸಲಾಗಿತ್ತು. ಜನರನ್ನು ತನ್ನ ಹಿಡಿತದೊಳಗೆ ಸೆಳೆಯಲು ಪಾಶುಪತ ಶೈವಧರ್ಮ, ವೀರಶೈವ ಧರ್ಮದೊಂದಿಗೆ ಸ್ಪರ್ಧಿಸುತ್ತಿತ್ತು. ಪಾಶುಪತ ಶೈವ ಗುರುವಿನಿಂದ ಇಷ್ಟಲಿಂಗವನ್ನು ಪಡೆದವರು ಅದನ್ನು ವೀರಶೈವ ಗುರುವಿಗೆ ಹಿಂದಿರುಗಿಸಬೇಕೆಂದೂ ಮತ್ತು ಅವನಿಂದ ಹೊಸ ಲಿಂಗವನ್ನು ಪಡೆಯಬೇಕೆಂದೂ ಬಸವಣ್ಣನವರು ಮತ್ತು ಅನುಯಾಯಿಗಳು ಗೊತ್ತು ಪಡಿಸಿದರು.

ವೀರಶೈವ ಧರ್ಮಕ್ಕೆ ಸೇರಿದವರ ಪೈಕಿ ಅನೇಕರು ಈ ನಿಯಮಗಳನ್ನು ಗಂಭೀರವಾಗಿ ತೆಗೆದುಕೊಳ್ಳಲಿಲ್ಲ. ಹೊಸ ಬೋಧನೆಗಳನ್ನು ಅನುಸರಿಸುವಂತೆ ಅವರನ್ನು ಅಪಾರ ಸಹನೆಯಿಂದ ಒತ್ತಾಯಪಡಿಸಬೇಕಾಯಿತು. ಇದು ಸುಲಭದ ಕೆಲಸವಾಗಿರಲಿಲ್ಲ.

ಹೊಸದಾಗಿ ಮತಾಂತರಗೊಂಡವರಲ್ಲಿ ಕೆಲವರು ಉಚ್ಚ ಜಾತಿಯ ವೀರ ಶೈವ ಹಾಗೂ ನೀಚ ಜಾತಿಯ ವೀರಶೈವ-ಇವರ ನಡುವೆ ಭೇದ ತೋರಿಸಿ ದರು. ಉದಾಹರಣೆಗೆ, ವೀರಶೈವ ಧರ್ಮಕ್ಕೆ ಮತಾಂತರಗೊಂಡ ಅಸ್ಪೃಶ್ಯನನ್ನು ನೀಚ ಜಾತಿಯ ವೀರಶೈವನೆಂದು ಕರೆಯಲಾಗುತ್ತಿತ್ತು ಮತ್ತು ಅವನ ಜೊತೆ ಹೀನಾಯವಾಗಿ ನಡೆದುಕೊಳ್ಳಲಾಗುತ್ತಿತ್ತು. ಸಹಭೋಜನವೇ ಮೊದಲಾದ ವಿಚಾರಗಳಲ್ಲಿ ಭೇದ ತೋರಿಸುತ್ತಿದ್ದಿಲ್ಲವೆಂದು ವಾದಿಸಬಹುದಾದರೂ ಮದುವೆಯಂತಹ ವಿಚಾರ ಬಂದಾಗ ಮಾತ್ರ ಇವರ ನಡುವೆ ಭೇದ ತೋರಿಸಲಾಗುತ್ತಿತ್ತು.

ಉಂಬಲ್ಲಿ ಉಡುವಲ್ಲಿ ಕ್ರೀಯಳಿಯಿಂತೆಂಬರು;
ಕೊಂಬಲ್ಲಿ ಕೊಡುವಲ್ಲಿ ಕುಲವನರಸುವರು
ಎಂತಯ್ಯಾ, ಅವರ ಭಕ್ತರೆಂಬೆ?
ಕೂಡಲಸಂಗಮ ದೇವ, ಕೇಳಯ್ಯಾ,
ಹೊಲತಿ ಶುದ್ಧ ನೀರ ಮಿಂದಂತಾಯಿತಯ್ಯಾ!

ಬಸವಣ್ಣನವರು ಯಾವುದನ್ನು ಕೆಡುಕೆಂದು ಖಂಡಿಸಿದ್ದರೋ ಅದು ಬೇರೆ ವೇಷದಲ್ಲಿ ಮರಳಿ ಬಂತು. ಧಾರ್ಮಿಕ ಮುಖಂಡರು ಇಂಥ ಸಮಸ್ಯೆಗಳನ್ನು ಸಂಪೂರ್ಣವಾಗಿ ತಿಳಿದಿದ್ದರು. ಹಾಗೂ ಭೇದಭಾವಗಳ ಎಲ್ಲ ರೂಪಗಳನ್ನೂ

ಬುಡಮಟ್ಟ ತೊಡೆದುಹಾಕಲು ಪ್ರಯತ್ನಿಸಿದರು.

ಅರ್ಥರಹಿತವಾದ ಸಂಸ್ಕಾರಗಳನ್ನು ಬಸವಣ್ಣನವರು ಖಂಡಿಸಿದರು. ಹಾಗೂ ಅವುಗಳ ಬದಲು ಸರಳವೂ ಸಮಂಜಸವೂ ಆದ ಆಚಾರಗಳನ್ನು ಬೋಧಿಸಿದರು. ಈ ಆಚಾರಗಳು ಒಳ್ಳೆಯ ಹಾಗೂ ಸ್ವಚ್ಛ ಜೀವನಕ್ಕೆ ನೆರವಾಗುವಂತಿದ್ದವು. ಇಂಥ ಐವತ್ತು ಆಚಾರಗಳ ಪಟ್ಟಿಯೊಂದನ್ನು ಚನ್ನಬಸವ ಮಾಡಿದ್ದಾನೆ. ಈ ಪಟ್ಟಿಯಲ್ಲಿ ಮುಂದಿನ ಆಚಾರಗಳು ಸೇರಿವೆ: ಪ್ರತಿದಿನ ಸ್ನಾನ ಮಾಡುವುದು, ಹಲ್ಲುಜ್ಜುವುದು, ಹಿಂಸೆ ಮಾಡದೆ ಇರುವುದು, ಸತ್ಯವನ್ನೇ ನುಡಿಯುವುದು, ಗಂಡ ಹೆಂಡಿರು ಪರಸ್ಪರರಿಗೆ ನಿಷ್ಠರಾಗಿರುವುದು, ಇತ್ಯಾದಿ. ಮುಖಂಡರಿಗೆ ಸಂಬಂಧಿಸಿದಂತೆ ಹೇಳುವುದಾದರೆ, ತಮ್ಮ ಅನುಯಾಯಿಗಳಿಗೆ ಜೀವನದ ಈ ಮೂಲತತ್ವಗಳಲ್ಲಿ ಕೆಲವನ್ನಾದರೂ ಬೋಧಿಸುವುದು ಅವರ ಅವಶ್ಯ ಕರ್ತವ್ಯವಾಗಿತ್ತು. ಆಂತರಿಕ ಪರಿಶುದ್ಧತೆಗೆ ವೀರಶೈವ ಧರ್ಮ ಪ್ರಾಮುಖ್ಯ ನೀಡುತ್ತಿದ್ದಿತು ಎಂದ ಮಾತ್ರಕ್ಕೆ ಬಾಹ್ಯ ಪರಿಶುದ್ಧತೆಯ ಪ್ರಾಮುಖ್ಯವನ್ನು ಅದು ಅಲ್ಲಗಳೆದಿತ್ತು ಎಂದೇನೂ ಅರ್ಥವಲ್ಲ.

ವೀರಶೈವ ಧರ್ಮ ಪ್ರಸಾರಕರು ಸ್ಥಳದಿಂದ ಸ್ಥಳಕ್ಕೆ ಸಂಚರಿಸಿ ತಮ್ಮ ಧರ್ಮವನ್ನು ಪ್ರಸಾರ ಮಾಡಿದರು. ವೀರಶೈವ ಧರ್ಮದ ಬಗ್ಗೆ ಬಡವರಿಗೆ ವಿವರಣೆ ನೀಡಲು ಹೊರಟ ಈ ಪ್ರಸಾರಕರಲ್ಲಿ ಕೆಲವರು ಅವರ ಮನೆಗಳಲ್ಲಿ ಸಿದ್ಧಪಡಿಸಲಾದ ಆಹಾರವನ್ನು ಸ್ವೀಕರಿಸಲು ನಿರಾಕರಿಸಿದರು. ಬದಲಾಗಿ ಭಕ್ತರಿಂದ ಅಡಿಗೆಯ ವಸ್ತುಗಳನ್ನು ಸಂಗ್ರಹಿಸಿ ಅವುಗಳಿಂದ ಬೇರೆಡೆಯಲ್ಲಿ ತಾವೇ ಅಡಿಗೆ ತಯಾರಿಸಿಕೊಂಡರು. ಇದು ಬಸವಣ್ಣನವರು ಹಾಗೂ ಮತ್ತಿತರರ ಗಮನಕ್ಕೆ ಬಂತು. ಈ ಪ್ರವೃತ್ತಿಯನ್ನು ಧಾರ್ಮಿಕ ಮುಖಂಡರು ತೀವ್ರವಾಗಿ ಖಂಡಿಸಿದರು. ಸಾಮಾಜಿಕ ದೃಷ್ಟಿಯಿಂದ ಯಾವನೇ ಒಬ್ಬ ವೀರಶೈವನೂ ಇನ್ನೊಬ್ಬ ವೀರಶೈವನಿಗಿಂತ ಮೇಲಿನವನಾಗಲಿ ಕೆಳಗಿನವನಾಗಲಿ ಆಗಿರಲಿಲ್ಲ. ಬಸವಣ್ಣನವರು "ಆವ ಕುಲವಾದರೇನು? ಶಿವಲಿಂಗವಿದ್ದವನೆ ಕುಲಜನು" ಎಂದು ಘೋಷಿಸಿದ್ದಾರೆ. ವೀರಶೈವರಾದ ಬಗ್ಗೆ ಹೆಮ್ಮೆ ಪಟ್ಟುಕೊಂಡಂತಹ ಹಾಗೂ ಈ ಕಾರಣಕ್ಕಾಗಿಯೇ ವೀರಶೈವೇತರರನ್ನು ಹೀನಾಯವಾಗಿ ಕಂಡ ಕೆಲವರೂ ಇದ್ದರು. ಇಂಥ ಪ್ರವೃತ್ತಿಗೆ ಬಸವಣ್ಣನವರೂ ಇತರರೂ ಪ್ರೋತ್ಸಾಹ ನೀಡಲಿಲ್ಲ. ವೀರಶೈವ ಧರ್ಮದಿಂದ ಸ್ವಧರ್ಮಕ್ಕೆ ಹಿಂದಿರುಗಿದ ಕೆಲವು ಜನರ ದೃಷ್ಟಾಂತಗಳೂ ಇವೆ. ಇಂಥ ಸ್ವಧರ್ಮ ಪರಿತ್ಯಾಗಿಗಳನ್ನೂ ಸ್ವಪಕ್ಷಪರಿತ್ಯಾಗಿಗಳನ್ನೂ ನಿರ್ಲಕ್ಷಿಸಬೇಕೆಂದು ಬಸವಣ್ಣನವರು ತಮ್ಮ ಅನುಯಾಯಿಗಳಿಗ ಕರೆ ನೀಡಿದರು.

ದೇವಾಲಯವೆಂಬುದು ಚೆನ್ನಾಗಿ ಸ್ಥಾಪಿತವಾದ ಧಾರ್ಮಿಕ ಹಾಗೂ ಸಾಮಾಜಿಕ ಸಂಸ್ಥೆಯಾಗಿತ್ತು. ಅಲ್ಲದೆ ಆರಾಧನಾ ಸ್ಥಳವಾಗಿ ಅದು

ಪಟ್ಟಣದ ಅಥವಾ ಗ್ರಾಮದ ನಾಭಿ ಕೇಂದ್ರವಾಗಿತ್ತು. ಹಳ್ಳಿಯ ಎಲ್ಲ ಚಟುವಟಿಕೆಗಳೂ ದೇವಾಲಯದ ಸುತ್ತಮುತ್ತಲೇ ನಡೆಯುತ್ತಿದ್ದುವು. ಪಾಶುಪತ ಶೈವ ಸಂನ್ಯಾಸಿಗಳು ತಮ್ಮ ತಮ್ಮ ದೇವಾಲಯ ಅಥವಾ ಮಠ ಗಳಲ್ಲಿಯೇ ಜೀವನ ಸಾಗಿಸುತ್ತಿದ್ದರೆಂದು ನಾವು ಈ ಹಿಂದೆಯೇ ನೋಡಿದ್ದೇವೆ. ಶೈವ ದೇವಾಲಯಗಳಲ್ಲಿ ಹೆಚ್ಚಿನವು ಪಾಶುಪತ ಶೈವಧರ್ಮದ ಪ್ರಬಲ ನೆಲೆಗಳಾಗಿದ್ದುವು. ಶ್ರೀಮಂತರೂ ವಿಶೇಷಾಧಿಕಾರವುಳ್ಳವರೂ ಹೆಚ್ಚು ಹಣ ವೆಚ್ಚ ಮಾಡಿ ದೇವಾಲಯಗಳನ್ನು ನಿರ್ಮಿಸಿದರು. ದೇವಾಲಯದ ನಿರ್ಮಾಣವಾಗುತ್ತಲೇ ಜನರು ವಿವಿಧ ಉದ್ದೇಶಗಳಿಗಾಗಿ ದಾನಗಳನ್ನು ನೀಡಲು ಧಾವಿಸಿ ಬರುತ್ತಿದ್ದರು. ಉದಾಹರಣೆಗೆ ವರ್ಷದ ಎಲ್ಲ ದಿನಗಳಲ್ಲಿಯೂ ನಂದಾದೀಪವಿರಿಸುವ ವ್ಯವಸ್ಥೆ ಮಾಡುವುದು, ದೇವಾಲಯದಲ್ಲಿ ನರ್ತಕಿಯರನ್ನು ಇರಿಸಿಕೊಳ್ಳಲು ವಿವಿಧ ಹಬ್ಬ ಹರಿದಿನಗಳನ್ನು ಆಚರಿಸಲು, ಅಲ್ಲಿ ನೆಲಸಿರುವ ಸಂನ್ಯಾಸಿಗಳ ಜೀವನ ನಿರ್ವಹಣೆಗೆ ಹಾಗೂ ಶೈಕ್ಷಣಿಕ ಚಟುವಟಿಕೆಗಳೇ ಮೊದಲಾದುವುಗಳಿಗಾಗಿ. ಇಂಥ ದಾನಗಳಿಗೆ ಸಂಬಂಧಿಸಿದ ವಿವರಗಳನ್ನು ದಾಖಲಿಸಿದ ಅನೇಕ ದಾನ ಶಾಸನಗಳಿವೆ. ದೇವಾಲಯದ ಆವರಣದೊಳಗೆ ಪ್ರವೇಶಿಸಲು ಅಸ್ಪೃಶ್ಯರಿಗೆ ಅವಕಾಶ ನೀಡುತ್ತಿದ್ದಿಲ್ಲವೆಂದು ಹೇಳಬೇಕಾಗಿಲ್ಲ.

ಬಸವಣ್ಣನವರ ದೃಷ್ಟಿಯಲ್ಲಿ ದೇವಾಲಯವೆಂಬುದು ಶ್ರೀಮಂತರೂ ಮತಾಂಧರೂ ಆದ ವ್ಯಕ್ತಿಗಳ ಸಾಂಸ್ಥಿಕತೆಯನ್ನು ಪ್ರತಿನಿಧಿಸಿತ್ತು. ಯಾವನೇ ವೀರಶೈವ ದೇವಾಲಯವನ್ನು ಕಟ್ಟಿಸಬೇಕಾಗಿಲ್ಲವೆಂದೂ ಅಥವಾ ದೇವಾಲಯವನ್ನು ಪ್ರವೇಶಿಸಿ ಪರಮಾತ್ಮನ ಪೂಜೆ ಮಾಡಬೇಕಾಗಿಲ್ಲವೆಂದೂ ಅವರೂ ಅವರ ಸಂಗಡಿಗರೂ ಸ್ಪಷ್ಟವಾಗಿ ತಿಳಿಸಿದರು. ಪರಮಾತ್ಮನು ಇಷ್ಟ ಲಿಂಗದ ರೂಪದಲ್ಲಿ ಯಾವಾಗಲೂ ವ್ಯಕ್ತಿಯ ದೇಹದಲ್ಲಿಯೇ ಇರುತ್ತಾನೆ; ತನ್ನ ನಿಜ ರೂಪದಲ್ಲಿ ಭಕ್ತನ ಹೃದಯದಲ್ಲಿಯೇ ನೆಲಸಿರುತ್ತಾನೆ.

ಉಳ್ಳವರು ಶಿವಾಲಯವ ಮಾಡುವರು;
ನಾನೇನ ಮಾಡುವೆ? ಬಡವನಯ್ಯಾ,
ಎನ್ನ ಕಾಲೇ ಕಂಭ, ದೇಹವೇ ದೇಗುಲ,
ಶಿರ ಹೊನ್ನ ಕಳಸವಯ್ಯಾ,
ಕೂಡಲ ಸಂಗಮದೇವ, ಕೇಳಯ್ಯಾ!
ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲಾ!

"ದೇವಾಲಯವು ಸ್ಥಾವರವಾದ್ದರಿಂದ ಇದು ಜಡತೆಯನ್ನೂ ಅಳಿವನ್ನೂ ಸೂಚಿಸುತ್ತದೆ; ಆದರೆ ಜಂಗಮವೆಂಬ ದೇಹ ಚಲಿಸುವ ದೇವಾಲಯ. ಅದು ಚೈತನ್ಯವನ್ನೂ ಬೆಳವಣಿಗೆಯನ್ನೂ ಸೂಚಿಸುತ್ತದೆ. ಆದ್ದರಿಂದ ನಿಮ್ಮ ದೇಹವನ್ನೇ ದೇವಾಲಯವನ್ನಾಗಿ ಮಾಡಿಕೊಳ್ಳಿ" ಎಂದಿದ್ದಾರೆ ಬಸವಣ್ಣನವರು.

ಏಕೆಂದರೆ ಭಕ್ತನಿಗೆ ನಿಜವಾಗಿ ದೇವರ ಬಗೆಗೆ ಇರುವ ಪ್ರೇಮದ ಪರೀಕ್ಷೆ ಆಗುವುದು ಸಾರ್ವಜನಿಕವಾಗಿ ಅಲ್ಲ; ಬದಲಾಗಿ ಗೋಪ್ಯವಾಗಿ. ಅಲ್ಲಿ ದೇವರೊಂದಿಗೆ ಅವನೊಬ್ಬನೇ ಇರುತ್ತಾನೆ.

ಆಚರಣೆಯಲ್ಲಿ ತರಲು ಕಷ್ಟವಾಗಿದ್ದರೂ ಇಂಥದೊಂದು ಚಳವಳಿ ಅಗತ್ಯವೆಂದು ಬಸವಣ್ಣನವರು ಭಾವಿಸಿದ್ದರು. ಏಕೆಂದರೆ ಅಸ್ಪೃಶ್ಯರಿಗೆ ದೇವಾಲಯ ಪ್ರವೇಶದ ಅವಕಾಶ ಮಾಡಿಕೊಡಲು ಸಂಪ್ರದಾಯಶೀಲರು ಸಿದ್ಧರಾಗಿರಲಿಲ್ಲ. ದೇವಾಲಯಗಳನ್ನು ನಿರ್ಮಿಸಲು ಸಂಪನ್ಮೂಲಗಳಾಗಲಿ ಅಪೇಕ್ಷೆಯಾಗಲಿ ಅವರಿಗಿರಲಿಲ್ಲ. ಅವರ ಅನುಯಾಯಿಗಳು ಹಾಗೂ ಸಂಗಡಿಗರಲ್ಲಿ ಅನೇಕರು ಬಡವರಾಗಿದ್ದರೆಂಬುದನ್ನು ನಾವಿಲ್ಲಿ ನೆನಪಿಗೆ ತಂದುಕೊಳ್ಳಬೇಕು. ಆದ್ದರಿಂದ ದೇವಾಲಯಗಳನ್ನು ಬಹಿಷ್ಕರಿಸುವುದಲ್ಲದೆ, ಬೇರಾವ ಮಾರ್ಗವೂ ಬಸವಣ್ಣನವರಿಗೆ ಉಳಿದಿರಲಿಲ್ಲ. ದೇವಾಲಯಗಳನ್ನೇ ಭದ್ರ ನೆಲೆಯಾಗಿರಿಸಿಕೊಂಡ ಪಾಶುಪತ ಶೈವ ಧರ್ಮಕ್ಕೆ ಇದೊಂದು ಪೆಟ್ಟೂ ಆಗಿತ್ತು.

ಅಲ್ಲದೆ ಸಂಚಾರ ಸೌಲಭ್ಯಗಳು ಸಾಕಷ್ಟಿಲ್ಲದ ಆ ದಿನಗಳಲ್ಲಿ ವಾರಾಣಸಿ ಮತ್ತು ರಾಮೇಶ್ವರಗಳಂತಹ ಸ್ಥಳಗಳಿಗೆ ಯಾತ್ರೆ ಹೋಗುವುದು ಅಪಾಯಕರವಾದ ಸಾಹಸವಾಗಿತ್ತು. ಸಾಮಾನ್ಯವಾಗಿ ಪ್ರಯಾಣದ ಕಾಲದಲ್ಲಿ ನಷ್ಟ ಹಾಗೂ ಅಪಾಯಗಳ ಸಂಭವಗಳು ಇರುತ್ತಿದ್ದುವು. ತಾವು ಸುರಕ್ಷಿತವಾಗಿ ಮರಳಿ ಬರುವುದು ಅನಿಶ್ಚಿತವಾಗಿದ್ದುದರಿಂದ ಅಂಥ ಕ್ಷೇತ್ರಗಳಿಗೆ ಯಾತ್ರೆ ಹೊರಡುವ ಮುನ್ನವೇ ಜನರು ತಮ್ಮ ಉಯಿಲುಗಳನ್ನು ಬರೆದಿಡುತ್ತಿದ್ದರೆಂಬ ವಿಚಾರ ಶಾಸನಗಳಿಂದ ತಿಳಿಯುತ್ತದೆ. ಬಸವಣ್ಣನವರು ಮತ್ತು ಇತರರಿಗೆ ಕ್ಷೇತ್ರಯಾತ್ರೆ ಎಂಬುದು ಸಮಯ, ಹಣ ಹಾಗೂ ಶ್ರಮಗಳ ವೃಥಾ ವ್ಯಯವಾಗಿ ಕಂಡು ಬಂತು. ವೀರಶೈವನ ದೇಹವೇ ಒಂದು ದೇವಾಲಯವಾದ್ದರಿಂದ ಅವನು ಯಾತ್ರೆಗಳನ್ನು ಕೈಗೊಳ್ಳಬೇಕಾದ ಅಗತ್ಯ ಇಲ್ಲವೆಂದು ಬಸವಣ್ಣನವರು ಸಾರಿದರು.

ಬಸವಣ್ಣನವರು ಮೂಢನಂಬಿಕೆಗಳನ್ನು ಕಡೆಗಣಿಸಿದರು. ಹಾಗೂ ಅವುಗಳನ್ನು ಬಿಟ್ಟುಬಿಡುವಂತೆ ತಮ್ಮ ಅನುಯಾಯಿಗಳನ್ನು ಕೋರಿದರು. ಸ್ಪರ್ಶದಿಂದ ಮೈಲಿಗೆಯುಂಟಾಗುವುದೆಂಬ ಕಲ್ಪನೆಯನ್ನು ಅವರು ಅಪಹಾಸ್ಯ ಮಾಡಿದರು. ವಿವಿಧ ಸಮಾರಂಭಗಳನ್ನು ನಡೆಸಲು ಶುಭ ದಿನಗಳನ್ನು ನಿರ್ಧರಿಸಲು ವೀರಶೈವರು ಜ್ಯೋತಿಷಿಗಳೊಂದಿಗೆ ಸಮಾಲೋಚನೆ ನಡೆಸಬೇಕಾಗಿಲ್ಲವೆಂದು ಬಸವಣ್ಣನವರು ಹೇಳಿದರು; ದೇವರನ್ನು ಸ್ಮರಿಸುವ ದಿನವೇ ಶುಭದಿನವೆಂದರು.

ಅಸ್ಪೃಶ್ಯರೆಂದೆನಿಸಿಕೊಂಡ ಹರಿಜನರ ಬಗ್ಗೆ ಬಸವಣ್ಣನವರಿಗೆ ಅಪಾರ ಪ್ರೇಮವಿತ್ತು. ಅವರನ್ನು ಹೊಲೆಯರೆಂದು ಕರೆಯುವುದನ್ನು ಬಸವಣ್ಣನವರು

ಅಲ್ಲಗಳೆದರು. ಗ್ರಾಮಗಳ ಹೊರಗೆ ತಮಗಾಗಿಯೇ ಪ್ರತ್ಯೇಕವಾಗಿ ವಿತರಣೆ ಮಾಡಲಾದ ಸ್ಥಳಗಳಲ್ಲಿ ಅಸ್ಪೃಶ್ಯರು ನೆಲೆಸಬೇಕಾಗಿತ್ತು. ಈ ಆಚರಣೆಯನ್ನು ಬಸವಣ್ಣನವರು ವಿರೋಧಿಸಿದರು. ಅವರಿಂದ ಗೌರವ ಪಡೆದಿದ್ದಂತಹ ಕೆಲವು ಶರಣರು ಹರಿಜನರಾಗಿದ್ದರು. ಅಲ್ಲದೆ ಸ್ವತಃ ಬಸವಣ್ಣನವರೇ ಎಲ್ಲರ ಗೌರವ ಪಡೆದ ಹರಿಜನರಿಂದ ಸುತ್ತುವರೆದಿದ್ದರು. ಜಾತಿಸಮಸ್ಯೆಯ ಬಗ್ಗೆ ಬಸವಣ್ಣನವರು ಚಿಂತನೆ ಮಾಡಿದ್ದರು. ಜಾತಿ ಜಾತಿಗಳ ನಡುವಣ ಭಿನ್ನತೆಗೆ, ಒಂದು ಜಾತಿ ಮಾಡಲೇಬೇಕೆಂದು ನಿರ್ದಿಷ್ಟ ಪಡಿಸಲಾದ ವೃತ್ತಿಗೆ ಇರುವ ಗೌರವವೇ ಕಾರಣವೆಂಬ ತೀರ್ಮಾನಕ್ಕೇ ಬಸವಣ್ಣನವರು ಬಂದರು. ಉದಾಹರಣೆಗೆ, ವೇದಗಳ ಅಧ್ಯಯನ ಮಾಡಿದವನನ್ನು ಅವರು ಬ್ರಾಹ್ಮಣ ನೆಂದು ಕರೆದರು. ಹೀಗೆ ಬಟ್ಟೆ ನೇಯುವವನನ್ನು ನೇಕಾರನೆಂದೂ, ಚಪ್ಪಲಿ ತಯಾರಿಸುವವನನ್ನು ಮೋಚಿಯೆಂದೂ ಅವರು ಕರೆದರು. ಇವರೆಲ್ಲರೂ ಸರಿ ಸಮಾನರು. ಬಸವಣ್ಣನವರ ನುಡಿಯನ್ನೇ ಉದ್ಧರಿಸುವುದಾದರೆ "ಯಾವನೇ ವ್ಯಕ್ತಿಯೂ (ತನ್ನ ತಾಯಿಯ) ಕಿವಿಗಳಿಂದ ಹುಟ್ಟಿ ಬಂದಿಲ್ಲ. (ಕರ್ಣದಲ್ಲಿ ಜನಿಸಿದವರುಂಟೆ ಜಗದೊಳಗೆ ?) ಹಾಗಾದರೆ ಈ ಲೋಕದಲ್ಲಿ ಅಸ್ಪೃಶ್ಯರೇ ಇಲ್ಲವೇ? ಇದ್ದಾರೆ ಎನ್ನುತ್ತಾರೆ ಬಸವಣ್ಣನವರು. ಆದರೆ ಅಸ್ಪೃಶ್ಯ ಎಂಬ ಪದಕ್ಕೆ ಅವರು ನೀಡಿದ ವ್ಯಾಖ್ಯೆಯೇ ಬೇರೆಯಾಗಿತ್ತು.

ಕೊಲುವನೇ ಮಾದಿಗ, ಹೊಲಸ ತಿಂಬವನೇ ಹೊಲೆಯ!
ಕುಲವೇನೋ, ಅವಂದಿರ ಕುಲವೇನೋ?
ಸಕಲ ಜೀವಾತ್ಮರಿಗೆ ಲೇಸನೇ ಬಯಸುವ
ನಮ್ಮ ಕೂಡಲ ಸಂಗನ ಶರಣರೇ ಕುಲಜರು.

ತಮ್ಮ ಆಲೋಚನೆಗಳಿಗನುಸಾರವಾಗಿ ಬಸವಣ್ಣನವರು ನಡೆದರು ಹಾಗೂ ಅಂತೆಯೇ ನಡೆಯುವಂತೆ ಇತರರನ್ನು ಒತ್ತಾಯಪಡಿಸಿದರು. ತಾವು ಚನ್ನಯ್ಯನೆಂಬ ಹರಿಜನ ಭಕ್ತನ ಸೇವಕರ ಅನೌರಸ ಶಿಶುವೆಂದು ಘೋಷಿಸು ವಷ್ಟು ದೂರದವರೆಗೂ ಅವರು ಹೋದರು. ಕೆಳ ಜಾತಿಯಲ್ಲಿ ಜನಿಸಿದವ ನೊಬ್ಬ ಭಕ್ತನಾದರೆ, ಅವನನ್ನಷ್ಟೇ ತಾವು ಗೌರವಿಸುವುದಲ್ಲದೆ, ಅವನ ನಾಯಿ ಯನ್ನೂ ಮೆರವಣಿಗೆಯಲ್ಲಿ ಕರೆದುಕೊಂಡು ಹೋಗಿ ಗೌರವ ನೀಡುವುದಾಗಿ ಅವರು ಹೇಳಿದರು. ಬಸವಣ್ಣನವರ ನಿಕಟ ಸಹಚರನಾದ ಕಕ್ಕಯ್ಯ ಹರಿಜನ ನಾಗಿದ್ದ. ಶಿವನಾಗಯ್ಯನಂತಹ ಇತರರೂ ಇದ್ದರು. ಇವರ ಕಥೆಗಳನ್ನು ಇಲ್ಲಿ ಉಲ್ಲೇಖಿಸುವುದು ಸಮಂಜಸವಾಗಿರುತ್ತದೆ.

ಹರಿಜನರು ಕಲ್ಯಾಣನಗರದ ಹೊರವಲಯಗಳಲ್ಲಿ ನೆಲಸಿದ್ದರು. ಅವರಲ್ಲಿ ಅನೇಕರು ವೀರಶೈವರಾಗಿದ್ದರು. ಬಸವಣ್ಣನವರೂ ಇತರರೂ ಅವರ ಕೇರಿ ಯನ್ನು 'ಹಿರಿಯ ಮಾಹೇಶ್ವರರ ಕೇರಿ'ಯೆಂದು[1] ಹೆಸರಿಸಿದ್ದರು ಮತ್ತು

1.'ಮಾಹೇಶ್ವರ' ಎಂಬ ಪದ 'ಶಿವನ ಭಕ್ತ' ಅಥವಾ 'ವೀರಶೈವ' ಎಂಬುದನ್ನು

ಅಲ್ಲಿಗೆ ಆಗಾಗ ಭೇಟಿ ನೀಡುವ ಅಭ್ಯಾಸವನ್ನಿಟ್ಟುಕೊಂಡಿದ್ದರು. ಒಂದು ದಿನ ಅವರು ಆ ಕೇರಿಯಲ್ಲಿ ಹೋಗುತ್ತಿದ್ದಾಗ, ಯಾರೋ ಶಿವ ಸ್ತುತಿಯನ್ನು ಹಾಡುತ್ತಿದ್ದುದು ಅವರಿಗೆ ಕೇಳಿಸಿತು. ಆ ಬಗ್ಗೆ ವಿಚಾರಿಸಿದಾಗ, ಶಿವಗೀತೆ ಹಾಡುತ್ತಿದ್ದವನು ಜನ್ಮತಃ ಹರಿಜನನಾದ ಸಂಬೋಳಿ ನಾಗಿ ದೇವ ಅಥವಾ ಶಿವನಾಗಯ್ಯನೆಂದು ತಿಳಿದು ಬಂತು. ಶಿವನಾಗಯ್ಯ ಮೇಲ್ವರ್ಗದ ಜನರಿಗೆ ಗೌರವ ತೋರಿಸುತ್ತಿದ್ದಿಲ್ಲವೆಂಬ ದೂರೊಂದು ನಗರದಲ್ಲಿತ್ತು. ಅಲ್ಲದೆ ಅವನು 'ದೂರ ಹೋಗಿ' (ಸಂಬೋಳಿ) ಎಂದು ಕೂಗುವುದನ್ನೂ ಬಿಟ್ಟು ಬಿಟ್ಟಿದ್ದ. ಅವನೊಬ್ಬ ಮಹಾಶಿವಭಕ್ತ. ಅವನ ಮನೆಗೆ ಬಸವಣ್ಣನವರು ಹೋದರು. ಅವನೊಂದಿಗೆ ದೇವರ ಪೂಜೆಯಲ್ಲೂ ಭಾಗವಹಿಸಿದರು, ಅವ ನೊಂದಿಗೆ ಊಟವನ್ನೂ ಮಾಡಿದರು. ಸಂಪ್ರದಾಯ ಶೀಲರಾದ ಜನರು ತಮ್ಮೊಬ್ಬ ಗುಪ್ತಚಾರನಿಂದ ಈ ವಿಚಾರ ತಿಳಿದುಕೊಂಡರು. ಮುಖ್ಯವಾಗಿ ಬ್ರಾಹ್ಮಣರು ಇಂಥ ಘಟನೆಯೊಂದು ನಿಜವಾಗಿ ಸಂಭವಿಸುವುದನ್ನೇ ಕಾಯುತ್ತಿದ್ದರು. ಅವರೊಂದು ತಂಡವಾಗಿ ಬಿಜ್ಜಳನಲ್ಲಿಗೆ ಹೋಗಿ, ಕೋಶಾ ಧ್ಯಕ್ಷರಾದ ಬಸವಣ್ಣನವರು ಹರಿಜನನ ಮನೆಗೆ ಹೋಗಿ 'ವರ್ಣಾಶ್ರಮಧರ್ಮ' ವನ್ನು ಉಲ್ಲಂಘಿಸಿದ್ದಾರೆ ಎಂದು ದೂರು ಹೇಳಿದರು. ಬಸವಣ್ಣನವರು ಮೈಲಿಗೆ ಹೊಂದಿರುವುದು ಮಾತ್ರವಲ್ಲದೆ, ಅವರು ರಾಜಾಸ್ಥಾನವನ್ನೂ ಮಲಿನ ಗೊಳಿಸುತ್ತಿದ್ದಾರೆ ಎಂದೂ ಹೇಳಿದರು. ಬಸವಣ್ಣನವರನ್ನು ಬಿಜ್ಜಳ ಕರೆಸಿದ, ಹಾಗೂ ರಾಜ ಸಭಾಂಗಣಕ್ಕೆ ಬಂದು ಅದನ್ನು ಮಲಿನಗೊಳಿಸದಂತೆ ತೆರೆದ ಜಾಗವೊಂದರಲ್ಲಿ ಅವರನ್ನು ಕುಳ್ಳಿರಿಸುವ ಏರ್ಪಾಟು ಮಾಡಿದ. ಬಸವಣ್ಣ ನವರು ರಾಜನಲ್ಲಿಗೆ ಬಂದಾಗ, ಅಸ್ಪೃಶ್ಯನ ಮನೆಯನ್ನು ಪ್ರವೇಶಿಸಿದುದಕ್ಕಾಗಿ ಅವರಿಗೆ ಛೀಮಾರಿ ಹಾಕಲಾಯಿತು. ಬಸವಣ್ಣನವರು ಒಂದು ಪವಾಡ ಮಾಡಿ ವಾಸ್ತವದಲ್ಲಿ ಬ್ರಾಹ್ಮಣರೇ ಆತ್ಮಭ್ರಷ್ಟರಾಗಿದ್ದಾರೆಂದೂ ಶಿವನಾಗಯ್ಯ ನಲ್ಲವೆಂದೂ ಸಾಧಿಸಿದರೆಂದು ಕಥೆ ಮುಂದುವರಿಯುತ್ತದೆ.

ಬಿಜ್ಜಳನು 'ವರ್ಣ ಧರ್ಮ'ವನ್ನು ಸ್ವೀಕರಿಸಿದಂಥ ಸಾಂಪ್ರದಾಯಿಕ ಧರ್ಮಕ್ಕೆ ಸೇರಿದವನಾಗಿದ್ದ. ಎಲ್ಲ ಮಾನವರೂ ಸರಿಸಮಾನರೆಂಬ ಬಸವಣ್ಣನವರ ಸಿದ್ಧಾಂತ ಅವನಿಗೆ ಇಷ್ಟವಾಗಿರಲಿಲ್ಲ. ಆದರೆ ಬಸವಣ್ಣನವರ ಅನುಯಾಯಿ ಗಳು ಈ ಆದರ್ಶವನ್ನು ಸಂತೋಷದಿಂದ ಒಪ್ಪಿದ್ದರು; ಹಾಗೂ ಅದೇ ರೀತಿ ಬದುಕಲೂ ಪ್ರಾರಂಭಿಸಿದ್ದರು. ಉದಾಹರಣೆಗೆ, ಜಗತ್ತಿನಲ್ಲಿರುವುದು ಸಜ್ಜನರ

---

ಸೂಚಿಸುತ್ತದೆ. ಬಸವಣ್ಣನವರು ಅಸ್ಪೃಶ್ಯರನ್ನು 'ಮಹಾವೀರಶೈವ'ರೆಂದು ಹೆಸರಿಸಿದ್ದನ್ನು ಗಮನಿಸುವುದು ಇಲ್ಲಿ ಮುಖ್ಯ. ಇದನ್ನು ಹೋಲುವಂತೆ, ಅಸ್ಪೃಶ್ಯರನ್ನು ರಾಮಾನುಜರು 'ತಿರುಕುಲ'ರೆಂದೂ ಗಾಂಧೀಜಿಯವರು 'ಹರಿಜನ'ರೆಂದೂ ಕರೆದಿದ್ದಾರೆ.

ಜಾತಿ ಮತ್ತು ದುರ್ಜನರ ಜಾತಿ - ಇವೆರಡೇ ಎಂದು ತುರುಗಾಹಿಯಾಗಿದ್ದ ರಾಮಣ್ಣ ತನ್ನೊಂದು ವಚನದಲ್ಲಿ ಹೇಳಿದ್ದಾನೆ. ಅಸ್ಪೃಶ್ಯರು ನಗರ ಅಥವಾ ಗ್ರಾಮಗಳ ಹೊರಗಿರುವುದಿಲ್ಲ, ಅವುಗಳ ಒಳಗೇ ಇರುತ್ತಾರೆ ಎಂದು ತೋರಿಸಲು ಅಂಬಿಗರ ಚೌಡಯ್ಯ ಪ್ರಯತ್ನಿಸಿದ್ದಾನೆ. "ತನ್ನ ತಾಯಿಯನ್ನು ದೂಷಿಸುವ, ತನ್ನ ತಂದೆಯೊಡನೆ ಹೀನಾಯವಾಗಿ ವರ್ತಿಸುವ, ಇನ್ನೊಬ್ಬನ ಹೆಂಡತಿಯನ್ನು ಪ್ರೇಮಿಸುವ ಹಾಗೂ ರಸ್ತೆಗಳ ಮೇಲೆ ಮುಳ್ಳುಗಳನ್ನು ಎಸೆಯುವ ವ್ಯಕ್ತಿಯೇ ಅಸ್ಪೃಶ್ಯ" ಎಂದು ಅವನು ವಾದಿಸಿದ್ದಾನೆ. ಅವನ ಅಭಿಪ್ರಾಯದಲ್ಲಿ "ಅಂತರಂಗದಲ್ಲಿ" ಅಸ್ಪೃಶ್ಯರಾದಂತಹ ಇವರಿಂದ ನಮಗೆ ಯಾವ ಪ್ರಯೋಜನವೂ ಇಲ್ಲ; ಆದರೆ 'ಬಾಹ್ಯದಲ್ಲಿ' ಅಸ್ಪೃಶ್ಯರೆನಿಸಿಕೊಂಡವರಿಂದ ಸಮಾಜಕ್ಕೆ ಪ್ರಯೋಜನಗಳಿವೆ. ಏಕೆಂದರೆ ಅವರೇ ಚಪ್ಪಲಿಗಳನ್ನೂ, ಹಗ್ಗಗಳನ್ನೂ ಚಾಟಿಗಳನ್ನೂ ದೋಣಿಗಳನ್ನೂ, ಸರಬರಾಜು ಮಾಡುವವರು". ಅಸ್ಪೃಶ್ಯ ಸಮಾಜದಿಂದ ಬಂದವರೊಡನೆ ವಿವಾಹ ಸಂಬಂಧ ಬೆಳೆಸುವಂತೆ ಉಚ್ಚ ಜಾತಿಗಳಿಗೆ ಸೇರಿದವರನ್ನು ಬಸವಣ್ಣನವರು ಪ್ರೋತ್ಸಾಹಿಸಿದುದನ್ನು ನಾವು ಅನಂತರ ಕಾಣುತ್ತೇವೆ.

ಎಲ್ಲರೂ ಆಚರಿಸುವಂತೆ ಹಾಗೂ ಅನುಸರಿಸುವಂತೆ ಕೇಳಿಕೊಳ್ಳಲಾದ ಇನ್ನೊಂದು ನೀತಿಬೋಧೆಯೇ 'ಕಾಯಕ'. ಈ ಶಬ್ದದ ಪದಶಃ ಅರ್ಥದಂತೆ, 'ಕಾಯಕ'ವು ಕಾಯಕ್ಕೆ ಸಂಬಂಧಿಸಿದ ಯಾವುದೇ ವಿಚಾರವಾಗಿರಬಹುದು. ಅದು ದೈಹಿಕ ಶ್ರಮವಾಗಿರಬಹುದು ಅಥವಾ ವ್ಯಕ್ತಿ ಕೈಗೊಳ್ಳುವ ಯಾವುದಾದರೂ ವೃತ್ತಿಯಾಗಿರಬಹುದು. ಬಸವಣ್ಣನವರು ಹಾಗೂ ಇತರರ ಅಭಿಪ್ರಾಯದಲ್ಲಿ ಪ್ರತಿಯೊಬ್ಬನೂ ತನ್ನ ಆಯ್ಕೆಯ ಯಾವುದಾದರೂ ಒಂದು ವೃತ್ತಿಯನ್ನು ಕೈಗೊಂಡು ಅದನ್ನು ಪ್ರಾಮಾಣಿಕತೆಯಿಂದ ನಡೆಸಿಕೊಂಡು ಹೋಗಬೇಕು. ಅಂದರೆ ಯಾವನೇ ವ್ಯಕ್ತಿಯೂ ಸಮಾಜಕ್ಕೊಂದು ಹೊರೆಯಾಗಿರಬಾರದು.

'ಕಾಯಕ'ವೊಂದನ್ನು ಕೈಗೊಂಡು ಕಷ್ಟಪಟ್ಟು ದುಡಿಯುವ ವ್ಯಕ್ತಿ ಅರ್ಪಿಸಿದುದನ್ನು - ಅದೆಷ್ಟೇ ಕ್ಷುಲ್ಲಕವಾಗಿರಲಿ - ದೇವರು ಸ್ವೀಕರಿಸುತ್ತಾನೆ ಎಂದಿದ್ದಾನೆ ನುಲಿಯಚಂದಯ್ಯ. ಯಾವುದೇ ಬಗೆಯ ಶೋಷಣೆಯನ್ನು ದೇವರು ಸಂಪೂರ್ಣವಾಗಿ ನಿರಾಕರಿಸುತ್ತಾನೆ. ಆದ್ದರಿಂದ ದೈಹಿಕವಾಗಿ ಹಾಗೂ ಮಾನಸಿಕವಾಗಿ ಕಷ್ಟಪಟ್ಟು ದುಡಿಯುವುದೇ ಕಾಯಕ. ಬಸವಣ್ಣನವರು ಬಿಜ್ಜಳನ ಕೈಕೆಳಗೆ ಭಂಡಾರಿಯಾಗಿ ಸೇವೆ ಸಲ್ಲಿಸಿದರು. ಆದ್ದರಿಂದ ಅದೇ ಅವರ ಕಾಯಕವಾಗಿತ್ತು.

ಕಾಯಕವೆಂಬ ಶಬ್ದಕ್ಕೆ ಇನ್ನೊಂದು ಅರ್ಥ ಸೂಚನೆಯೂ ಇದೆ. ವ್ಯಕ್ತಿ ಕೈಗೊಳ್ಳುವ ವೃತ್ತಿ ಅವನ ಧರ್ಮಾಚರಣೆಗೆ ಸಹಾಯಕವಾಗಬೇಕು; ಅದು ದೇವರನ್ನು ಅರಿಯುವ ಒಂದು ಸಾಧನವೂ ಆಗಬೇಕು. "ಮಾಡುವ

ಮಾಟದಿಂದಲೆ ಬೇರೊಂದನರಿಯಬೇಕು'' ಎಂದಿದ್ದಾನೆ ಅಲ್ಲಮಪ್ರಭು. ಒಂದು ನಿರ್ದಿಷ್ಟ ವೃತ್ತಿಯನ್ನು ಕೈಗೊಂಡ ವ್ಯಕ್ತಿ ಅದನ್ನು ಪ್ರಾಮಾಣಿಕತೆ ಹಾಗೂ ನಿಷ್ಠೆಗಳಿಂದ ಮಾಡಬೇಕು; ತನ್ನ ಸಂಪಾದನೆಯ ಒಂದು ಭಾಗ ವನ್ನು ಜಂಗಮರಿಗೂ ('ಜಂಗಮ'ರೆಂದರೆ ವೀರಶೈವ ಧರ್ಮ ಪ್ರಸಾರಕರು. ಇವರನ್ನು ವೀರಶೈವ ಸಮಾಜ ಸಲಹಬೇಕೆಂದು ನಿರೀಕ್ಷಿಸಲಾಗಿತ್ತು.) ಬಡವರಿಗೂ ಹಂಚಬೇಕು.

ಯಾವುದೇ ವೃತ್ತಿಯೂ ಇನ್ನೊಂದು ವೃತ್ತಿಗಿಂತ ಉಚ್ಚ ಅಥವಾ ನೀಚ ವಾಗಿರುವುದಿಲ್ಲ ಎಂಬ ಇನ್ನೊಂದು ಅರ್ಥಸೂಚನೆಯೂ ಕಾಯಕ ಎಂಬ ಶಬ್ದಕ್ಕಿದೆ. ಎಲ್ಲರ ಅಂತಸ್ತುಗಳೂ ಸಮನಾಗಿವೆ. ತಮ್ಮ ತಮ್ಮ ಕೆಲಸಗಳನ್ನು ಮಾಡುವ ಎಲ್ಲ ವ್ಯಕ್ತಿಗಳೂ ಗೌರವಾರ್ಹರು. ಬಸವಣ್ಣನವರ ಅನುಯಾಯಿ ಗಳು ಕೈಗೊಂಡ ವೃತ್ತಿಗಳ ಸ್ವಾರಸ್ಯಕರವಾದ ಪಟ್ಟಿಯೊಂದನ್ನು ಆ ಕಾಲದ ಸಾಹಿತ್ಯ ನೀಡುತ್ತದೆ. ಮಾಚಯ್ಯ ಮಡಿವಾಳನಾಗಿದ್ದ; ಮೇಳಿಗೆಯ ಮಾರಯ್ಯ ಕಟ್ಟಿಗೆ ಮಾರುತ್ತಿದ್ದ; ಚೌಡಯ್ಯ ಅಂಬಿಗನಾಗಿದ್ದ; ಕೇತಯ್ಯ ಚಾಪೆ ಹಾಗೂ ಬುಟ್ಟಿಗಳನ್ನು ಹೆಣೆಯುವ ವೃತ್ತಿಯ ಮೇದರವನಾಗಿದ್ದ; ಚಂದಯ್ಯ ಹಗ್ಗ ಹೊಸೆಯುವವನಾಗಿದ್ದ. ಹಳ್ಳಯ್ಯ ಪಾದರಕ್ಷೆ ಹೊಲಿ ಯುವ ಅಸ್ಪೃಶ್ಯನಾಗಿದ್ದ; ಸಂಗಣ್ಣ ವೈದ್ಯನಾಗಿದ್ದ. ರಾಮಣ್ಣ ದನಗಳನ್ನು ಕಾಯುವವನಾಗಿದ್ದ. ಬೇರೆ ಬೇರೆ ವೃತ್ತಿಗಳನ್ನು ಕೈಗೊಂಡ ಇತರರೂ ಇದ್ದರು. ಇವರೆಲ್ಲರೂ ಕಲ್ಯಾಣಕ್ಕೆ ಬಂದು ಬಸವಣ್ಣನವರ ಬೋಧನೆಗಳಿಂದ ಸ್ಫೂರ್ತಿ ಪಡೆದರು. ಇವರಲ್ಲಿ ಹೆಚ್ಚಿನವರು ಬಡವರಾಗಿದ್ದರು. ಆದರೂ ಧಾರ್ಮಿಕ ಚರ್ಚೆಗಳಲ್ಲಿ ಭಾಗವಹಿಸಿ ತಮ್ಮ ಅಭಿಪ್ರಾಯಗಳನ್ನು ಮುಕ್ತವಾಗಿ ವ್ಯಕ್ತಪಡಿಸಿದರು.

ಬಸವಣ್ಣನವರು ಬರಿಯ ಅಧಿಕಾರಿಯಾಗಿದ್ದರು. ಸಮಾಜದ ಮೇಲೆ ನಿಯಮಗಳನ್ನು ಹೇರುವ ಹಾಗೂ ಜನರು ಪ್ರಜಾಸತ್ತಾತ್ಮಕ ಜೀವನದಲ್ಲಿ ಪ್ರವೇಶಿಸುವಂತೆ ಮಾಡುವ ಅಧಿಕಾರ ಅವರಿಗಿರಲಿಲ್ಲ. ಆದರೂ ತಮ್ಮ ಅನುಯಾಯಿಗಳು ತಮ್ಮನ್ನು ಅರ್ಥಮಾಡಿಕೊಳ್ಳುವಂತೆ ಅವರು ಮಾಡಿ ದರು. ಹಾಗೂ ಅಂಥ ಬದುಕು ಸಾಗಿಸುವಂತೆ ಬೋಧಿಸಿದರು. ಅಲ್ಲದೆ ಸಂಪತ್ತಿನ ಮೋಹವನ್ನು ಹುಟ್ಟಿಸಿಕೊಳ್ಳದಂತೆ ತಮ್ಮ ಅನುಯಾಯಿಗಳಿಗೆ ಅವರು ಉಪದೇಶ ಮಾಡಿದರು. ಬಡವರನ್ನು ಪ್ರೀತಿಸುವಂತೆ, ಅವರ ಸೇವೆ ಮಾಡುವಂತೆ, ಕೇಳಿಕೊಂಡರು. ಶ್ರೀಮಂತರು ಹಾಗೂ ಅವರ ಪ್ರತಿಷ್ಠೆ-ಪೊಳ್ಳುತನಗಳ ಬಗ್ಗೆ ಅವರಿಗೆ ತೀವ್ರ ಜುಗುಪ್ಸೆಯಿತ್ತು.

ಹಾವು ತಿಂದವರ ನುಡಿಸಬಹುದು;
ಗರಹೊಡೆದವರ ನುಡಿಸಬಹುದು;
ಸಿರಿಗರ ಹೊಡೆದವರ ನುಡಿಸಲು ಬಾರದು, ನೋಡಯ್ಯಾ!

ಬಡತನವೆಂಬ ಮಂತ್ರವಾದಿ ಹೊಗಲು
ಒಡನೆ ನುಡಿವರು, ಕೂಡಲ ಸಂಗಮದೇವಾ.

ಬಡತನವೆಂಬ ಹೆಸರಿನ ಮಾಂತ್ರಿಕ ಬಂದ ತತ್‌ಕ್ಷಣ ಶ್ರೀಮಂತರು ತಮ್ಮ ಮೌನವನ್ನು ಮುರಿಯುವರು ಎಂಬ ಕಲ್ಪನೆ ಸುಂದರವೂ ಸ್ವೋಪಜ್ಞವೂ ಆಗಿದೆ. ಶ್ರೀಮಂತರು ನ್ಯಾಯವಿರುದ್ಧವಾದ ಮಾರ್ಗಗಳಿಂದ ತಮ್ಮ ಸಂಪತ್ತನ್ನು ಶೇಖರಿಸಿದರೆಂಬುದನ್ನು ಬಸವಣ್ಣನವರು ಮನಗಂಡಿದ್ದರು. ಆದ್ದರಿಂದಲೇ ಅವರ ಸಂಪತ್ತಿನ ಬಹುಭಾಗ ಪ್ರಾಯಶ್ಚಿತ್ತ ಹಾಗೂ ಸಮಾರಂಭಗಳಿಗಾಗಿ ವ್ಯಯವಾಗುತ್ತಿತ್ತು. ಮತ್ತು ಅದು ಅಗತ್ಯವುಳ್ಳವರ ಸಲುವಾಗಿ ವ್ಯಯವಾಗುತ್ತಿರಲಿಲ್ಲ. ನಾಯಿಯ ಹಾಲು ನಾಯಿಯ ಮರಿಗಳಿಗೆ ಮಾತ್ರ ಆಹಾರವಾಗುತ್ತದೆ; ಸಿಹಿ ತಿಂಡಿಗಳ ತಯಾರಿಗೆ ಅದು ತಕ್ಕುದಾಗಿರುವುದಿಲ್ಲವೆಂದು ಬಸವಣ್ಣನವರು ಈ ಕಾರಣದಿಂದಲೇ ಅಣಕದ ಮಾತನ್ನಾಡಿದ್ದಾರೆ. ಆದ್ದರಿಂದಲೇ ನ್ಯಾಯಯುಕ್ತವಲ್ಲದ ಮಾರ್ಗದಿಂದ ಶೇಖರಿಸಿದ ಸಂಪತ್ತನ್ನು ಹೇಯವಾಗಿ ಕಾಣಬೇಕೆಂದು ಅವರು ಸೂಚಿಸಿದರು. ಅವರ ಅಭಿಪ್ರಾಯದಂತೆ ಹಣವೇ ಎಲ್ಲ ಕೆಡುಕುಗಳಿಗೂ ಮೂಲವಾಗಿತ್ತು. ಶ್ರೀಮಂತರು ತಮ್ಮ ಸಂಪತ್ತಿನ ಬಗ್ಗೆಯೇ ಯಾವಾಗಲೂ ಆಲೋಚಿಸುತ್ತಿರುವುದರಿಂದ, ಅವರಿಗೆ ದೇವರ ಬಗ್ಗೆ ಚಿಂತಿಸಲು ಹೆಚ್ಚು ಬಿಡುವಿರುವುದಿಲ್ಲ. ತನ್ನ ಪಾದರಕ್ಷೆಗಳನ್ನು ಹೊರಗೆ ಬಿಟ್ಟು ದೇವಾಲಯದೊಳಗೆ ಪ್ರವೇಶಿಸುವಂತಹ ಭಕ್ತನಿಗೆ ಅವರನ್ನು ಬಸವಣ್ಣನವರು ಹೋಲಿಸಿದ್ದಾರೆ. ಅವನು ದೇವರೆದುರು ನಿಂತಿರುತ್ತಾನೆ; ಸಂದೇಹವಿಲ್ಲ. ಆದರೆ ಅವನು ತನ್ನ ಪಾದರಕ್ಷೆಗಳ ಸುರಕ್ಷಿತತೆಯ ಬಗೆಗಷ್ಟೇ ಚಿಂತಿಸುತ್ತಿರುತ್ತಾನೆ. ದೇವರ ಬಗ್ಗೆ ಅವನೆಂದೂ ಚಿಂತಿಸುವುದೇ ಇಲ್ಲ. ಆದ್ದರಿಂದಲೇ ಹಣದ ಬಗ್ಗೆ ಪುಚ್ಚರಾಗಬಾರದೆಂದು ಬಸವಣ್ಣನವರು ತಮ್ಮ ಅನುಯಾಯಿಗಳಿಗೆ ಎಚ್ಚರಿಕೆ ನೀಡಿದರು. ದೇವರ ಬಗ್ಗೆ ಶ್ರೀಮಂತರಿಗಿರುವ ಪ್ರೇಮ ಕೇವಲ ತೋರಿಕೆಯದು ಹಾಗೂ ಸೋಗಿನದು.

ಆದರೆ ಬಡವರ ರೀತಿಯೇ ಬೇರೆ. "ಮನೆ ನೋಡಾ, ಬಡವರು; ಮನನೋಡಾ, ಘನ" ಎಂದು ಬಸವಣ್ಣನವರು ಹೇಳಿದ್ದಾರೆ. ಬಡವನಾದ ಭಕ್ತನೊಂದಿಗೆ ಹೀನಾಯವಾಗಿ ವರ್ತಿಸದಂತೆ ತಮ್ಮ ಅನುಯಾಯಿಗಳಿಗೆ ಬಸವಣ್ಣನವರು ಆದೇಶ ನೀಡಿದ್ದಾರೆ. ಅವರನ್ನು ಮನೆಗೆ ಆಹ್ವಾನಿಸಿ, ಆದರಾತಿಥ್ಯ ಮಾಡುವಂತೆ ಕೇಳಿಕೊಂಡಿದ್ದಾರೆ.

ಬಸವಣ್ಣನವರು ತಮ್ಮಲ್ಲಿದ್ದುದೆಲ್ಲವನ್ನೂ ಧಾರ್ಮಿಕ ಉದ್ದೇಶಗಳಿಗಾಗಿ ಉದಾರವಾಗಿ ದಾನಮಾಡಿದರು. ತಮಗೆ ಶ್ರೀಮಂತಿಕೆಯನ್ನು ಅನುಗ್ರಹಿಸುವಂತೆ ಬಸವಣ್ಣನವರು ದೇವರನ್ನು ಪ್ರಾರ್ಥಿಸಿದರು. ಅಗತ್ಯವುಳ್ಳವರಿಗೆ ತಮ್ಮಲ್ಲಿರುವುದನ್ನು ಯಾವಾಗಲೂ ಹಂಚುತ್ತಿರಲು ಹಾಗೂ ತಾವು ಸದಾ

ಬಡವರಾಗಿಯೇ ಇರಲು ಸಾಧ್ಯವಾಗಬೇಕೆಂಬುದೇ ಅವರ ಈ ಪ್ರಾರ್ಥನೆಯ ಉದ್ದೇಶವಾಗಿತ್ತು.

ಒಡೆದೋಡು ಎನ್ನ ಮನೆಯಲ್ಲಿಲ್ಲದಂತೆ ಮಾಡಯ್ಯಾ,
ಕೊಡು ದೇವ, ಎನ್ನ ಕೈಯಲ್ಲೊಂದು ಕರಿಕೆಯ;
'ಮೃಡ ದೇವಾ ಶರಣೆ'ಂದು ಭಿಕ್ಷಕ್ಕೆ ಹೋದರೆ, ಅಲ್ಲಿ,
'ನಡೆ ದೇವಾ' ಎಂದೆನಿಸು, ಕೂಡಲ ಸಂಗಮದೇವಾ!

ಬಸವಣ್ಣನವರು ಬಡವರ ಪರ ಹೋರಾಡುವವರಾಗಿದ್ದರು. ಬಡತನ ವೆಂಬುದು ಪಾಪವಲ್ಲವೆಂದೂ ಬಡವನು ಕೀಳರಿಮೆಯಿಂದ ನರಳಬಾರ ದೆಂದೂ ಅವರು ತಿಳಿಸಿದರು. ಅವರು ಜನರಲ್ಲಿ ಆತ್ಮಗೌರವದ ಭಾವನೆ ಯನ್ನು ಬಿತ್ತಿದರು. ಅತಿ ದರಿದ್ರರ ಮನೆಗಳಿಗೂ ಹೋಗಿ ಆ ಜನರೊಂದಿಗೆ ಬೆರೆತರು; ಅವರೊಂದಿಗೆ ಊಟ ಮಾಡಲೂ ಅವರು ಹಿಂಜರಿಯಲಿಲ್ಲ. ಬಡವರ ಸೇವಕನಂತೆ ವರ್ತಿಸಿದರು. ಜನರು ಯಾವುದಾದರೂ ವೃತ್ತಿಯನ್ನು ಕೈಗೊಂಡು ಕಷ್ಟಪಟ್ಟು ದುಡಿದು ಸಂತೋಷವಾಗಿರಬೇಕೆಂದು ಅಪೇಕ್ಷಿಸಿ ದರು. ಈ ದೃಷ್ಟಿಕೋನದಿಂದ ನೋಡುವಾಗ, ಬಸವಣ್ಣನವರದು ಸಮಾಜ ವಾದಿಯ ಮನೋಭಾವವಾಗಿದ್ದಿತೆಂದು ನಾನು ನಿಸ್ಸಂದೇಹವಾಗಿ ಹೇಳ ಬಹುದು.

ಸಾಮಾನ್ಯವಾಗಿ ಪುರುಷರಿಗಿರುವಂತಹ ಸೌಲಭ್ಯಗಳು ಹಾಗೂ ಹಕ್ಕುಗಳಲ್ಲಿ ಕೆಲವು ಸ್ತ್ರೀಯರಿಗೆ ಇದ್ದಿರಲಿಲ್ಲವೆಂದು ನಾವು ಮೊದಲನೆಯ ಅಧ್ಯಾಯ ದಲ್ಲಿಯೆ ನೋಡಿದ್ದೇವೆ. ಸಾಮಾಜಿಕವಾಗಿ ಸ್ತ್ರೀಯರು ಪುರುಷರಿಗಿಂತ ಕೆಳಗಿನವರೆಂದು ಭಾವಿಸಲಾಗಿತ್ತು. ಅವರ ಚಟುವಟಿಕೆಗಳೆಲ್ಲ ಮನೆಗೇ ಸೀಮಿತವಾಗಿದ್ದುವು. ಅಂಥದೊಂದು ಸನ್ನಿವೇಶದಲ್ಲಿ ಬಸವಣ್ಣನವರೂ ಅವರ ಸಂಗಡಿಗರೂ, ಸ್ತ್ರೀಯರ ಬಗೆಗಿರುವ ಅನ್ಯಾಯದ ವಿರುದ್ಧ ಪ್ರತಿಭಟಿಸಿ ದರು. ನ್ಯಾಯವಾಗಿ ದೊರಕಬೇಕಾದಂತಹ ಸ್ವಾತಂತ್ರ್ಯದ ಅವಕಾಶವನ್ನು ಅವರಿಗೆ ಕಲ್ಪಿಸಿಕೊಡಬೇಕೆಂದು ಘೋಷಿಸಿದರು. ಉದಾಹರಣೆಗೆ, ಉತ್ತಮ ಶಿಕ್ಷಣ ಪಡೆಯುವ ಹಕ್ಕು, ತಮ್ಮ ಅಭಿಪ್ರಾಯಗಳನ್ನು ಮುಕ್ತವಾಗಿ ವ್ಯಕ್ತ ಪಡಿಸುವ ಹಕ್ಕು; ಸಾರ್ವಜನಿಕ ಚರ್ಚೆಗಳಲ್ಲಿ ಭಾಗವಹಿಸುವ ಹಕ್ಕು ಹಾಗೂ ಎಲ್ಲಕ್ಕಿಂತ ಮಿಗಿಲಾಗಿ ಆಧ್ಯಾತ್ಮಿಕ ಆಚರಣೆಗಳನ್ನು ಕೈಗೊಳ್ಳುವ ಹಕ್ಕು. ಸ್ತ್ರೀಯೆಂದರೆ ಮಾಯೆಯೆಂದು ಭಾವಿಸಲಾಗಿತ್ತು. ಇದೇ ಕಾರಣದಿಂದ ಅವಳನ್ನು ಎಲ್ಲ ಕೆಡುಕುಗಳ ಮೂಲವೆಂದು ತಿಳಿಯಲಾಗಿತ್ತು. ಸ್ತ್ರೀಗೆ ಇಂಥ ಯಾವುದೇ ಕಳಂಕವನ್ನೂ ಹಚ್ಚುವುದನ್ನು ಬಸವಣ್ಣನವರು ಸಹಿಸ ಲಿಲ್ಲ. ಹನ್ನೊಂದನೆಯ ಶತಮಾನದ ಶಿವಶರಣನಾದ ದೇವರದಾಸಿಮಯ್ಯನು, ಸ್ತ್ರೀಯರೊಂದಿಗೆ ಗೌರವದಿಂದ ವ್ಯವಹರಿಸುವುದರ ಪರವಾಗಿ ತನ್ನ ಧ್ವನಿ

ಯನ್ನೆತ್ತಿದ್ದಾನೆ. ಅವನೆಂದಂತೆ,

ಮೊಲೆ ಮೂಡಿ ಬಂದರೆ ಹೆಣ್ಣೆಂಬರು;
ಗಡ್ಡಮೀಸೆ ಬಂದರೆ ಗಂಡೆಂಬರು;
ನಡುವೆ ಸುಳಿವಾತ್ಮನು ಗಂಡೂ ಅಲ್ಲ;
ಹೆಣ್ಣೂ ಅಲ್ಲ......

ಈ ಶರಣನು ಸ್ತ್ರಿ ಪುರುಷರನ್ನು ಬೆಂಕಿಯನ್ನುಂಟು ಮಾಡಲು ಒಂದರ ಮೇಲೊಂದನ್ನಿಟ್ಟ ಎರಡು ಕಡ್ಡಿಗಳಿಗೆ ಹೋಲಿಸಿದ್ದಾನೆ. ತಾನು ಇಷ್ಟಪಡುವಂತಹ ಹುಡುಗಿಯನ್ನು ಹುಡುಕುತ್ತಾ ಇವನು ಹೋದನೆಂದೂ ಕೊನೆಯಲ್ಲಿ ಅಂಥವಳೊಬ್ಬಳು ಅವನಿಗೆ ದೊರಕಿದಳೆಂದೂ ನಮಗೆ ತಿಳಿದಿದೆ. ಸಾಮರಸ್ಯ ಹಾಗೂ ಪರಸ್ಪರ ಅರಿವಿನ ಜೀವನ ನಡೆಸುವ ದಂಪತಿಗಳ ಭಕ್ತಿ ಶಿವನಿಗೆ ಪ್ರಿಯವಾಗಿರುತ್ತದೆಂದು ಇವನು ಹೇಳಿದ್ದಾನೆ.

ಬಸವಣ್ಣನವರೂ ಮತ್ತಿತರ ಶರಣರೂ ದೇವರ ದಾಸಿಮಯ್ಯನಿಂದಲೇ ಈ ವಿಚಾರವನ್ನು ಕಲಿತರು. ಸ್ತ್ರೀಯರನ್ನು ದಾಸ್ಯದಿಂದ ವಿಮೋಚನೆಗೊಳಿಸುವು ದನ್ನು ತಮ್ಮ ಕ್ರಾಂತಿಯ ಧ್ಯೇಯ ಮಂತ್ರಗಳಲ್ಲಿ ಒಂದನ್ನಾಗಿ ಅವರು ಮಾಡಿಕೊಂಡರು. ಹೆಣ್ಣು ಮಾಯೆಯಲ್ಲವೆಂದೂ ಅವಳು ದೈವೀ ಸ್ವರೂಪ ಳೆಂದೂ ಬಸವಣ್ಣನವರ ಸಂಗಡಿಗನಾಗಿದ್ದ ಸಿದ್ಧರಾಮ ಹೇಳಿದ್ದಾನೆ. ಇನ್ನೊಬ್ಬ ಸಂಗಡಿಗನಾಗಿದ್ದ ಅಲ್ಲಮಪ್ರಭು ಮಾಯೆಯೆಂಬ ಶಬ್ದಕ್ಕೆ ಹೊಸ ವ್ಯಾಖ್ಯೆಯೊಂದನ್ನು ನೀಡಿದ್ದಾನೆ. ಅವನ ಅಭಿಪ್ರಾಯದಲ್ಲಿ, ಹೆಣ್ಣು, ಮಣ್ಣು ಅಥವಾ ಹೊನ್ನು ಯಾವುದೂ ಮಾಯೆಯಲ್ಲ; 'ಮನದ ಮುಂದಣ ಆಸೆಯೇ ಮಾಯೆ'. ಮಾಯೆಯೆಂದರೆ, ವಸ್ತುಗಳನ್ನು ಪಡೆದು ಅವು ಗಳನ್ನು ಭೋಗಿಸಬೇಕೆಂಬ ಇಚ್ಛೆಯಲ್ಲದೆ ಬೇರೇನೂ ಅಲ್ಲ. ಸ್ತ್ರೀಪುರುಷರು ಎರಡು ಕಣ್ಣುಗಳಂತೆ; ಒಂದು ಕಣ್ಣು ಇನ್ನೊಂದಕ್ಕಿಂತ ಶ್ರೇಷ್ಠವೆಂದೂ' ವಾದಿಸುವಂತಿಲ್ಲವೆಂದೂ ಅಲ್ಲಮಪ್ರಭು ತನ್ನ ಇನ್ನೊಂದು ವಚನದಲ್ಲಿ ಹೇಳಿದ್ದಾನೆ.

ವೀರಶೈವ ಧರ್ಮ ಬ್ರಹ್ಮಚರ್ಯಕ್ಕೆ ಅತ್ಯಂತ ಮಹತ್ವವನ್ನೇನೂ ನೀಡಿಲ್ಲ. ಅಥವಾ ಅದು ವಿವಾಹವನ್ನು ಖಂಡಿಸಿಯೂ ಇಲ್ಲ. ಅಲ್ಲಮ ಹಾಗೂ ಸಿದ್ಧರಾಮರಂತಹ ಕೆಲವು ವೀರಶೈವ ಮುಖಂಡರು ಬ್ರಹ್ಮಚಾರಿಗಳಾಗಿದ್ದ ರೆಂಬುದರಲ್ಲಿ ಸಂದೇಹವಿಲ್ಲ. ಆದರೆ ಇಂಥ ಬ್ರಹ್ಮಚಾರಿಗಳ ಸಂಖ್ಯೆ ಕಡಿಮೆ ಯಾಗಿತ್ತು. ಸ್ವತಃ ಬಸವಣ್ಣನವರಂತಹ ಇತರ ವಿವಾಹಿತ ವ್ಯಕ್ತಿಗಳ ಸಂಖ್ಯೆಯೇ ಹೆಚ್ಚು. ವಾಸ್ತವವಾಗಿ ಬಸವಣ್ಣನವರಿಗೇ ಒಬ್ಬಳ ಬದಲಾಗಿ ಇಬ್ಬರು ಹೆಂಡತಿಯರಿದ್ದರು.

ವಿವಿಧ ವೃತ್ತಿಗಳನ್ನು ಕೈಗೊಂಡು ತಮ್ಮ ಕುಟುಂಬಕ್ಕಾಗಿ ಸಂಪಾದಿಸುವಂತೆ ಸ್ತ್ರೀಯರಿಗೆ ಉತ್ತೇಜನ ನೀಡಲಾಯಿತು. ಪುರುಷರಂತೆ ಆಧ್ಯಾತ್ಮಿಕ

ಆಚರಣೆಗಳಲ್ಲಿ ಭಾಗವಹಿಸುವಂತೆಯೂ ಅವರಿಗೆ ಪ್ರೋತ್ಸಾಹ ನೀಡಲಾಯಿತು. ಹಾಡುಗಳು ಮತ್ತು ಕಾವ್ಯದ ಮೂಲಕ ತಮ್ಮನ್ನು ಅಭಿವ್ಯಕ್ತಿಗೊಳಿಸಿಕೊಳ್ಳಲು ಕೂಡ ಸ್ತ್ರೀಯರಿಗೆ ಪ್ರಚೋದನೆ ದೊರೆಯಿತು. ಇವೆಲ್ಲದರ ಫಲಿತಾಂಶವಾಗಿ ಆ ಶತಮಾನದ ಅನುಭವಿ ಶರಣರಲ್ಲಿ, ವಚನಗಳನ್ನು ರಚಿಸಿದ ಕನಿಷ್ಠ ಮೂವತ್ತೆರಡು ಮಂದಿ ಸ್ತ್ರೀಯರನ್ನಾದರೂ ನಾವು ಕಾಣುತ್ತೇವೆ. ಬಸವಣ್ಣನವರ ಪತ್ನಿಯರಾದ ನೀಲಲೋಚನೆ ಮತ್ತು ಗಂಗಾಂಬಿಕೆ ಇವರಿಬ್ಬರೂ ವಚನಗಳನ್ನು ರಚಿಸಿದ್ದಾರೆ. ಬಸವಣ್ಣನವರ ಅಕ್ಕನಾದ ಅಕ್ಕನಾಗಮ್ಮ ಅಥವಾ ನಾಗಲಾಂಬೆ ಕೂಡ ವಚನಗಳನ್ನು ರಚಿಸಿದ್ದಾಳೆ. ಹಗ್ಗ ಹೊಸೆಯುವ ಅಮ್ಮವ್ವೆ, ಒಬ್ಬಟ್ಟಿನ ಪಿಟ್ಟವ್ವೆ, ಕೊಟ್ಟಣದ ಸೋಮವ್ವೆಯರೂ ವಚನ ರಚನೆ ಮಾಡಿದ್ದಾರೆ. ಮುಂಜಾವಿನ ಮುನ್ನ ಪ್ರತಿ ಮನೆಗೂ ಭೇಟಿ ನೀಡಿ, ಮನೆಯಲ್ಲಿರುವವರನ್ನು ದಿನಾರಂಭದ ಧ್ಯಾನಕ್ಕಾಗಿ ಎಚ್ಚರಿಸುವಂತಹ ಬೇರೆಬೇರೆ ವೃತ್ತಿಗಳನ್ನು ಕೈಗೊಂಡ ಇತರ ಸ್ತ್ರೀಯರೂ ಇದ್ದರು. ಕೆಲವರು ಸಾರ್ವಜನಿಕ ಸಭೆಗಳಲ್ಲಿ ವಚನಗಳನ್ನು ಹಾಡುವುದನ್ನೇ ಕಾಯಕವನ್ನಾಗಿ ಮಾಡಿಕೊಂಡಿದ್ದರು. ಅತ್ಯಂತ ಸುಂದರವಾದ, ಸಾಹಿತ್ಯಿಕ ಮೌಲ್ಯದಿಂದ ಕೂಡಿದ ವಚನಗಳು, ಅಕ್ಕಮಹಾದೇವಿ, ರಾಣಿ ಮಹಾದೇವಿ, ಮುಕ್ತಾಯಕ್ಕ ಹಾಗೂ ಲಕ್ಕಮ್ಮ -ಇವರಿಂದ ರಚಿತವಾಗಿವೆ. ಇವರೆಲ್ಲ ಆಧ್ಯಾತ್ಮಿಕ ಔನ್ನತ್ಯವನ್ನೇರಿದ ಮಹಾನುಭಾವಿಗಳಾಗಿದ್ದರು. ಇಲ್ಲಿ ಉಲ್ಲೇಖಿಸಲಾದ ಹಾಗೂ ಮುಂದೆ ವಿವರಿಸಲಾಗುವ, ಈ ಸ್ತ್ರೀಯರ ಜೀವನಕ್ಕೆ ಸಂಬಂಧಿಸಿದ ಕಥಾನಕಗಳು, ಸಂದರ್ಭ ದೊರೆತಾಗಲೆಲ್ಲ ಸಮಾಜದ ವಿರುದ್ಧ ಎದ್ದು ನಿಲ್ಲಲು ಇವರಿಗೆ ಹೇಗೆ ಪ್ರಚೋದನೆ ದೊರೆಯಿತು ಎಂಬುದನ್ನು ತೋರಿಸುತ್ತವೆ. ಯಾವನೇ 'ಭವಿ'ಯನ್ನು ಮದುವೆಯಾಗುವುದಿಲ್ಲವೆಂದು ಅಕ್ಕಮಹಾದೇವಿ ನಿರ್ಧರಿಸಿದ್ದಳು. ಅವಳು ಬಾಲ್ಯದಲ್ಲಿಯೇ ದೇವರನ್ನು ತನ್ನ ಪತಿಯಾಗಿ ಆಯ್ಕೆ ಮಾಡಿಕೊಂಡದ್ದೇ ಇದಕ್ಕೆ ಕಾರಣ. ಆದರೆ ಬಲವಂತಕ್ಕೊಳಪಟ್ಟು ಅವಳು ರಾಜನೊಬ್ಬನ ಕೈಹಿಡಿಯಬೇಕಾಗಿ ಬಂತು. ಅವನೊಂದಿಗೆ ಬಾಳುವುದು ಹಾಗೂ ಅದೇ ಕಾಲದಲ್ಲಿ ದೇವರನ್ನೂ ಪ್ರೀತಿಸುವುದು ಅವಳಿಗೆ ಕಷ್ಟವಾಗಿ ಕಂಡು ಬಂತು. ಅವಳು ಪತಿಯಿಂದ ವಿಚ್ಛೇದನ ಪಡೆದು ಅರಮನೆಯನ್ನು ತೊರೆದು ಬರುವಷ್ಟು ಧೈರ್ಯ ತೋರಿಸಿದಳು. ಅನಂತರ ಅನುಭಾವೀ ಶಿವಶರಣೆಯಾಗಿ ಒಂದೆಡೆಯಿಂದ ಇನ್ನೊಂದೆಡೆಗೆ ಸಂಚರಿಸುತ್ತ ಜೀವನ ಸಾಗಿಸತೊಡಗಿದಳು. ತಮ್ಮ ಪತಿಯರೊಂದಿಗೆ ಧಾರ್ಮಿಕ ಆಚರಣೆಗಳಲ್ಲಿ ನಿರತರಾಗಿದ್ದ ಅನೇಕ ಸ್ತ್ರೀಯರ ಕಥೆಗಳನ್ನು ನಾವು ಓದಿದ್ದೇವೆ. ಕೆಲವು ಸಂದರ್ಭಗಳಲ್ಲಿ ಅವರು ಧಾರ್ಮಿಕ ವಿಚಾರಗಳಿಗೆ ಸಬಂಧಿಸಿದಂತೆ ಗಂಡಂದಿರಿಗೆ ಸಲಹೆ ನೀಡಿದ್ದೂ ಉಂಟು. ಅವರಲ್ಲನೇಕರು ಸುಶಿಕ್ಷಿತರಾಗಿದ್ದರು ಹಾಗೂ ಬಸವಣ್ಣನವರ ಮನೆಯಲ್ಲಿ

ನಡೆಯುವ ಧಾರ್ಮಿಕ ಚರ್ಚೆಗಳಲ್ಲಿ ಭಾಗವಹಿಸುತ್ತಿದ್ದರು. ತಮ್ಮ ಸಾಮರ್ಥ್ಯಗಳನ್ನು ಅರಿತು ಕೊಳ್ಳಲು ಮತ್ತು ಸಾಮಾಜಿಕ ಚಟುವಟಿಕೆಗಳಲ್ಲಿ ಭಾಗವಹಿಸಲು ಸ್ತ್ರೀಯರಿಗೆ ಯುಕ್ತವಾದ ವಾತಾವರಣ ಸೃಷ್ಟಿಯಾಗಿತ್ತು. ಯಾವುದೇ ಇತರ ಭಾರತೀಯ ಭಾಷೆಯಲ್ಲಿ, ಯಾವ ಕಾಲದಲ್ಲಿಯೇ ಆಗಲಿ, ಇಷ್ಟು ಅಧಿಕ ಸಂಖ್ಯೆಯ ಬರಹಗಾರ್ತಿಯರು ಇದ್ದರೇ ಎಂಬುದು ಸಂದೇಹಾಸ್ಪದ ವಿಚಾರವಾಗಿದೆ.

ಬಸವಣ್ಣನವರ ಅನುಯಾಯಿಗಳಿಗೆ ಲಭಿಸಿದ್ದ ಸಂಪೂರ್ಣ ವಾಕ್ ಸ್ವಾತಂತ್ರ್ಯ ಅವರ ಕ್ರಾಂತಿಗೆ ಸಂಬಂಧಪಟ್ಟ ಇನ್ನೊಂದು ಗಮನಾರ್ಹ ಅಂಶವಾಗಿದೆ. ಅವರ ಮನೆಗೆ ಸಾವಿರಾರು ಮಂದಿ ಭಕ್ತರು ಬರುತ್ತಿದ್ದರೆಂದೂ ಅವರೊಡನೆ ಬಸವಣ್ಣನವರು ಭಕ್ತಿಗೀತೆಗಳನ್ನು ಹಾಡುತ್ತ ಶಿವನ ಬಗ್ಗೆ ಮಾತನಾಡುತ್ತ ರಾತ್ರಿಗಳನ್ನು ಕಳೆಯುತ್ತಿದ್ದರೆಂದೂ ನಾವು ಹಿಂದೆಯೇ ನೋಡಿದ್ದೇವೆ. ಕೆಲವು ಸಲ ಇಂಥ ಸಭೆಗಳು ವಿಚಾರಗೋಷ್ಠಿಗಳಾಗಿ ರೂಪಾಂತರ ಹೊಂದುತ್ತಿದ್ದುವು. ಅಲ್ಲಿ ಕ್ರಾಂತಿ ಹಾಗೂ ಧರ್ಮಗಳಿಗೆ ಸಂಬಂಧಿಸಿದ ವಿಚಾರಗಳ ಬಗೆಗಿನ ಚರ್ಚೆ ನಡೆಯುತ್ತಿತ್ತು. ಅಂಥ ಸಮೂಹ ಚರ್ಚೆಗಳಲ್ಲಿ ಬಸವಣ್ಣನವರು ಮೊದಲಿನಿಂದ ಕೊನೆಯವರೆಗೂ ಸಮ್ಮ ಭಾಗಿಗಳಾಗಿ ಹಾಗೂ ಶ್ರೋತೃಗಳಾಗಿ ಇರುತ್ತಿದ್ದರು. ಭಾಗಿಗಳು ಚರ್ಚೆಯಲ್ಲಿ ಮುಕ್ತವಾಗಿ ಭಾಗವಹಿಸುತ್ತಿದ್ದರು. ಹಾಗೂ ಯಾವುದೇ ಅಂಜಿಕೆಯಿಲ್ಲದೆ ತಮ್ಮ ಭಾವನೆಗಳನ್ನು ವ್ಯಕ್ತಪಡಿಸುತ್ತಿದ್ದರು. ಅವರ ಧರ್ಮಗಳಿಗೆ ಸಂಬಂಧಪಟ್ಟ ಎಲ್ಲ ವಿಷಯಗಳನ್ನು ಮತ್ತೆ ಮತ್ತೆ ಚರ್ಚಿಸಲಾಗುತ್ತಿತ್ತು. ತಮ್ಮ ಅನೇಕ ಲೋಪದೋಷಗಳಿಗಾಗಿ ಬಸವಣ್ಣನವರೇ ಮಡಿವಾಳ ಮಾಚಯ್ಯನ ಟೀಕೆಗೊಳಗಾಗುತ್ತಿದ್ದರು.

ಬಸವಣ್ಣನವರ ಪರಿಕಲ್ಪನೆಗಳು ಹೊಸವಷ್ಟೇ ಆಗಿರದೆ ಆ ಕಾಲದ ದೃಷ್ಟಿಯಿಂದ ತುಂಬ ಮುಂದುವರಿದಂಥವೂ ಆಗಿದ್ದುವು. ಅವರ ಪ್ರತಿಯೊಂದು ಪರಿಕಲ್ಪನೆಯೂ ಸಾಂಪ್ರದಾಯಿಕತೆಗೆ ಒಂದೊಂದು ಪೆಟ್ಟಾಗಿತ್ತು. ಬಸವಣ್ಣನವರ ಕ್ರಾಂತಿ ಜನರಲ್ಲಿ ಹೊಸ ಭಾವನೆಗಳು ಮೂಡಲು ಕಾರಣವಾಯಿತು. ಅಲ್ಲದೆ ಸಾಮಾನ್ಯ ವ್ಯಕ್ತಿಗೂ ತನ್ನ ಸ್ವಂತ ಹಕ್ಕು ಬಾಧ್ಯತೆಗಳ ಅರಿವುಂಟಾಯಿತು. ತಮ್ಮ ಬಗ್ಗೆ ಮಾಡಲಾದ ಅನ್ಯಾಯಗಳ ಪ್ರಜ್ಞೆ ಜನ-ಸಾಮಾನ್ಯರಿಗೆ ಉಂಟಾದಾಗ, ರಾಜಕೀಯ ಹಾಗೂ ಧಾರ್ಮಿಕ ಅಧಿಕಾರಗಳಲ್ಲಿರುವ ವ್ಯಕ್ತಿಗಳಿಗೆ ಮನಃಕ್ಷೋಭೆಯುಂಟಾಯಿತು. ಬ್ರಾಹ್ಮಣರ ಹಾಗೂ ಉಚ್ಚ ಜಾತಿಗಳಿಗೆ ಸೇರಿದ ಇತರ ಜನರ ಅಧಿಕಾರಗಳನ್ನು ಪ್ರಶ್ನಿಸುವ ಪ್ರಯತ್ನಗಳು ನಡೆದುದನ್ನು ಹಿಂದೆಯೇ ತೋರಿಸಿದ್ದೇವೆ. ಬ್ರಾಹ್ಮಣರ ಶ್ರೇಷ್ಠತೆಗೆ ಅಸ್ಪೃಶ್ಯನೂ ಮಡಿವಾಳನೂ ಸವಾಲೆಸೆದರು. ಜನರನ್ನು ಎತ್ತಿ ಕಟ್ಟಿ ಸಾಮಾಜಿಕ ವ್ಯವಸ್ಥೆಯನ್ನು ಬುಡಮೇಲು ಮಾಡುತ್ತಿದ್ದಾರೆಂದು ಬಸವಣ್ಣನವರ ಮೇಲೆ

ಆಪಾದನೆ ಹೊರಿಸಲಾಯಿತು. ಸಂಪ್ರದಾಯಶೀಲರಾದ ಜನರು, ನಾವು ಹಿಂದೆಯೇ ನೋಡಿದಂತೆ, ಬಸವಣ್ಣನ ತೇಜೋವಧೆ ಮಾಡಿ ಅವರ ಘನತೆಗೂ ಕ್ರಾಂತಿಗೂ ಅಗೌರವ ತರಲು ಪ್ರಯತ್ನಿಸಿದರು. ಅವರ ಪ್ರಾಣಕ್ಕೆ ಅಪಾಯ ವುಂಟೆಂಬ ವದಂತಿಗಳೂ ಹಬ್ಬಿದವು. ಇಂಥ ವಿಚಾರಗಳು ಬಸವಣ್ಣನವರಿ ಗೇನೂ ಹೊಸವಾಗಿರಲಿಲ್ಲ. ಅವರು ಇವುಗಳನ್ನೆಲ್ಲ ಶಾಂತವಾಗಿ ನಿರ್ಲಕ್ಷಿಸಿ ದರು. ಯಾವುದೇ ಕಾಲದಲ್ಲಾಗಲಿ, ಎಂಥ ಪರಿಣಾಮಗಳನ್ನಾದರೂ ಎದುರಿ ಸಲು ತಾವು ಸಿದ್ಧರಾಗಿರುವುದಾಗಿ ಅವರು ಘೋಷಿಸಿದರು.

ನಾಳೆ ಬಪ್ಪುದು ನಮಗಿಂದೆ ಬರಲಿ;
ಇಂದು ಬಪ್ಪುದು ನಮಗೀಗಲೆ ಬರಲಿ;
ಇದಕಾರಂಜುವರು, ಇದಕಾರಳುಕುವರು?
"ಜಾತಸ್ಯ ಮರಣಂ ಧ್ರುವಂ" ಎಂಬುದಾಗಿ,
ನಮ್ಮ ಕೂಡಲ ಸಂಗಮದೇವರು ಬರೆದ ಬರೆಹವ ತಪ್ಪಿಸುವರೆ.
ಹರಿಬ್ರಹ್ಮಾದಿಗಳಿಗಳವಲ್ಲಾ!

ತಮಗೆ ಯಾವ ಹಾನಿಯನ್ನೂ ಉಂಟುಮಾಡಲು ಸಾಧ್ಯವಿಲ್ಲವೆಂದು ಅವರು ಶತ್ರುಗಳಿಗೆ ತಿಳಿಸಿದರು. ಆನೆಯ ಮೇಲೆ ಕುಳಿತುಕೊಂಡ ವ್ಯಕ್ತಿಗೆ ಬೊಗಳುವ ನಾಯಿಗಳು ಯಾವ ಹಾನಿಯನ್ನೂ ಉಂಟು ಮಾಡಲಾರ ವೆಂದು ಅವರು ಹೇಳಿದರು. ಬಸವಣ್ಣನವರೊಬ್ಬರು ಹುಟ್ಟು ಹೋರಾಟಗಾರ ರಾಗಿದ್ದರೆಂಬುದು ಅವರ ಈ ಕೆಗಿನ ವಚನದಿಂದ ಸ್ಪಷ್ಟವಾಗುತ್ತದೆ:

ನ್ಯಾಯ ನಿಷ್ಠುರಿ, ದಾಕ್ಷಿಣ್ಯಪರನು ನಾನಲ್ಲ;
ಲೋಕವಿರೋಧಿ, ಶರಣನಾರಿಗಂಜುವನಲ್ಲ,
ಕೂಡಲ ಸಂಗಮದೇವರ ರಾಜತೇಜದಲ್ಲಿಪ್ಪನಾಗಿ

ತಾವು ಮಾಡುತ್ತಿರುವುದು ಸರಿಯಾದುದೆಂದೂ ತಮಗೆ ಶಿವನ ಆಶೀ ರ್ವಾದ ಹಾಗೂ ರಕ್ಷಣೆಗಳು ಇವೆಯೆಂದೂ ಅವರಿಗೆ ತಿಳಿದಿತ್ತು. ತಮ್ಮ ಶತ್ರುಗಳ ವಿರೋಧ ಹೆಚ್ಚುತ್ತಿದ್ದರೂ ಈ ದೃಢನಂಬಿಕೆಯೇ ಬಸವಣ್ಣನವರನ್ನು ಪ್ರಬಲರನ್ನಾಗಿ ಮಾಡಿತ್ತು.

ಬಸವಣ್ಣನವರು ಜಾರಿಗೆ ತಂದ ಸಾಮಾಜಿಕ ಸುಧಾರಣೆಗಳಲ್ಲಿ ಕೆಲವು ಬೆರಗುಪಡುವಷ್ಟು ನವೀನವಾಗಿದ್ದುವು. ಅವು ಖಂಡಿತವಾಗಿ ನಮ್ಮ ಮೆಚ್ಚುಗೆಯನ್ನು ಸೆಳೆಯುತ್ತವೆ. ತಾವು ಬೋಧಿಸಿದ ಭಾವನೆಗಳನ್ನು ಅವರು ಆಚರಣೆಗೆ ತಂದರು. ಹೆಚ್ಚು ಹೆಚ್ಚು ಜನರು ಅವರನ್ನು ಅರ್ಥ ಮಾಡಿ ಕೊಂಡು ಅವರನ್ನು ಅನುಸರಿಸಿದರು ಎಂದು ತೋರಿಸಲು ನಮ್ಮಲ್ಲಿ ಆಧಾರವಿದೆ. ಈ ಬಗೆಯ ಹಾಗೂ ಈ ಪ್ರಮಾಣದ ಇನ್ನೊಂದು ಸಾಮಾಜಿಕ ಧಾರ್ಮಿಕ ಕ್ರಾಂತಿಯನ್ನು ಭಾರತದ ಇತಿಹಾಸದಲ್ಲಿಯೇ ನಾವು ಕಂಡಿಲ್ಲ; ಕರ್ನಾಟಕದ ಇತಿಹಾಸದಲ್ಲಂತೂ ಇದು ನಿಜವಾಗಿಯೂ ಹೆಸರಿಸಬಹುದಾದ ಮೊದಲ ಕ್ರಾಂತಿಯಾಗಿದೆ.

# 7. ಆಧ್ಯಾತ್ಮಿಕ ಸಾಧಕ

ಬಸವಣ್ಣನವರ ಬೌದ್ಧಿಕ ಹಾಗೂ ಆಧ್ಯಾತ್ಮಿಕ ಘರ್ಷಣೆಗಳು ಅವರ ಜೀವನ ಕಥೆಯನ್ನು ಹೆಚ್ಚು ಸ್ವಾರಸ್ಯಕರವಾಗಿ ಮಾಡಿವೆ. ಅವರ ಬುದ್ಧಿಶಕ್ತಿ ಆ ಕಾಲದ ಸಮಾಜದ ಮೇಲೆ ಎಂಥ ಹತೋಟಿಯನ್ನು ಇರಿಸಿಕೊಂಡಿತ್ತು ಹಾಗೂ ನಮ್ಮ ಈ ಲೋಕದ ಬದುಕಿನಲ್ಲಿ ಹೆಚ್ಚು ಮಾಧುರ್ಯವನ್ನೂ ಬೆಳಕನ್ನೂ ತರಲು ಹೇಗೆ ಶ್ರಮಿಸಿತು ಎಂಬುದನ್ನು ನಾವು ಹಿಂದಿನ ಅಧ್ಯಾಯದಲ್ಲಿ ನೋಡಿದ್ದೇವೆ. ಇದು ಅವರು ಬಾಹ್ಯ ಜಗತ್ತಿನೊಡನೆ ನಡೆಸಿದ ಮೊದಲನೆಯ ಹೋರಾಟವಾಗಿದ್ದರೆ, ಎರಡನೆಯ ಹೋರಾಟ ಅವರ ಒಳ ಜಗತ್ತಿನಲ್ಲಿಯೆ ನಡೆಯಿತು. ಎಂದರೆ ಈ ಹೋರಾಟ ನಡೆದದ್ದು ಯಾವುದೇ ಇತರ ವ್ಯಕ್ತಿಯ ಅಥವಾ ವ್ಯಕ್ತಿಗಳ ಜೊತೆಗಲ್ಲ; ಬದಲಾಗಿ ಇದು ಅವರು ಭಕ್ತಿ ಸಾಧನೆಯ ಮಾರ್ಗದಲ್ಲಿ ತಮ್ಮಲ್ಲಿಯೆ ತಾವು, ತಮ್ಮೊಡನೆಯೇ ತಾವು ನಡೆಸಿದ ಹೋರಾಟವಾಗಿದೆ.

ಬಸವಣ್ಣನವರೊಬ್ಬ ಭಕ್ತರಾಗಿದ್ದರು. ಅವರ ವಚನಗಳು ಅವರ ಆಧ್ಯಾತ್ಮಿಕ ಘರ್ಷಣೆಗಳ ಮೇಲಿನ, ಮತ್ತು ಪ್ರತಿಯೊಬ್ಬ ಸಾಧಕನೂ ತನ್ನ ಆಧ್ಯಾತ್ಮಿಕ ಯಾತ್ರೆಗಳಲ್ಲಿ ಎದುರಿಸಲೇಬೇಕಾಗಿ ಬರುವ ಘರ್ಷಣೆಗಳ ಮೇಲಿನ ಮಹಾ ವ್ಯಾಖ್ಯಾನಗಳಾಗಿವೆ. ಬಸವಣ್ಣನವರ ಸಾಮಾನ್ಯ ದೈನಂದಿನ ಜೀವನದ ಮೇಲೆ ಅವರ ವಚನಗಳು ಹೆಚ್ಚು ಬೆಳಕು ಬೀರುವುದಿಲ್ಲ. ಆದರೆ ಅವರ ಆಧ್ಯಾತ್ಮಿಕ ವಿಕಾಸದ ಹಾಗೂ ತಮ್ಮನ್ನು ಮಾನಸಿಕವಾಗಿ ಪರಿಶುದ್ಧರನ್ನಾಗಿ ಇರಿಸಿಕೊಳ್ಳಲು ಮತ್ತು ತಮ್ಮ ಹೃದಯವನ್ನು ದೇವರಿಗೆ ವಾಸಯೋಗ್ಯವಾದ ಸ್ಥಳವನ್ನಾಗಿ ಮಾಡಲು ಅವರು ನಡೆಸಿದ ಹೋರಾಟದ ಸಮಗ್ರ ಇತಿಹಾಸವನ್ನು ಇವು ನಮ್ಮ ಮುಂದೆ ಇರಿಸುತ್ತವೆ. ದೇವರನ್ನು ಸೇರಿ ಅವನಲ್ಲಿ ಒಂದಾಗಲು ಬಸವಣ್ಣನವರು ನಡೆಸಿದ ನಿರಂತರ ಪ್ರಯತ್ನಗಳನ್ನು ಅವರ ವಚನಗಳು ದಾಖಲಿಸಿವೆ.

ಬಸವಣ್ಣನವರ ಸಾಧನೆ ಬಾಗೇವಾಡಿಯಲ್ಲಿಯೇ ಪ್ರಾರಂಭವಾಗಿತ್ತು. ಆದರೆ ನಾವು ಈ ಮೊದಲೆ ಹೇಳಿದಂತೆ, ದೇವರ ಬಗ್ಗೆ ಅವರಿಗಿರುವ ಪ್ರೇಮ ತನ್ನ ಪೂರ್ಣ ಅಭಿವ್ಯಕ್ತಿಯನ್ನು ಪ್ರಕಟಪಡಿಸಿದ್ದು ಕೂಡಲ ಸಂಗಮದಲ್ಲಿ. ಅಂದಿನಿಂದ ಮುಂದೆ ಅವರೊಬ್ಬ ಸ್ಥಿರೀಕರಣ ಪಡೆದ ಆಧ್ಯಾತ್ಮಿಕ ಸಾಧಕರಾದರು.

ಬಸವಣ್ಣನವರು, ಸಮಾಜದ ಕುಂದುಕೊರತೆಗಳಿಗಾಗಿ ಅದನ್ನು ಟೀಕಿಸಿದರು. ತಮ್ಮ ಲೋಪದೋಷಗಳಿಗಾಗಿ ತಮ್ಮನ್ನೇ ಅವರು ತೀವ್ರವಾಗಿ ಟೀಕಿಸಿ ಕೊಂಡದ್ದೂ ಉಂಟು. ಸಾಮಾನ್ಯ ವ್ಯಕ್ತಿಗಳಿಗಿರುವಂತಹ ಎಲ್ಲ ದೌರ್ಬಲ್ಯಗಳೂ ಅವರಲ್ಲಿದ್ದವು, ಅದರ ಅರಿವೂ ಅವರಿಗಿತ್ತು ಆ ಬಗ್ಗೆ ಅವರು ವ್ಯಥಿತರೂ ಆಗಿದ್ದರು. ತಮ್ಮ ಚಿತ್ತ ಒಂದು ಅತ್ತಿಯ ಹಣ್ಣಿನಂತೆ; ಹೊರಗೆ ಸುಂದರ ಹಾಗೂ ಆಕರ್ಷಕ; ಆದರೆ ಒಳಗಿರುವುದೆಲ್ಲ ಹುಳುಗಳೇ ಎಂದು ಅವರಿಗೆ ತಿಳಿದಿತ್ತು. ದುರದೃಷ್ಟವಶಾತ್, ಮನಸ್ಸೆಂಬುದು ಕೈಯಲ್ಲಿ ಹಿಡಿದುಕೊಂಡು ಸ್ವಚ್ಛಗೊಳಿಸಬಲ್ಲ ಒಂದು ವಸ್ತುವಲ್ಲ. ಅದು 'ಯಾವುದೋ ಒಂದು ಕೊಂಬೆಯಿಂದ ಇನ್ನೊಂದು ಕೊಂಬೆಗೆ ಹಾರುತ್ತಿರುವ ಮರ್ಕಟನಂತೆ!' ದೇವರನ್ನು ಪ್ರೀತಿಸುವುದನ್ನು ತಮ್ಮ ಮನಸ್ಸಿಗೆ ಕಲಿಸಲು ಬಸವಣ್ಣನವರು ಕಷ್ಟದಿಂದ ಪ್ರಯತ್ನಿಸಿದರು. ಆದರೆ ತನ್ನೆಲ್ಲ ಆಕರ್ಷಣೆಗಳೊಂದಿಗೆ ಈ ಲೋಕ, ಅವರ ಮನಸ್ಸು ಐಹಿಕ ಸುಖ ಸಂತೋಷಗಳ ಬೆಂಬತ್ತುವಂತೆ ಮಾಡುತ್ತಿತ್ತು.

ತುಪ್ಪದ ಸವಿಗೆ ಅಲಗ ನೆಕ್ಕುವ ಸೊಣಗದಂತೆನ್ನ ಬಾಳುವೆ!
ಸಂಸಾರಸಂಗವ ಬಿಡದು ನೋಡೆನ್ನ ಮನವು.
ಈ ನಾಯಿತನವ ಮಾಣಿಸು,
ಕೂಡಲಸಂಗಮದೇವಾ, ನಿಮ್ಮ ಧರ್ಮ!

ತೀವ್ರ ನಿರಾಶೆಯಿಂದ ಬಸವಣ್ಣನವರು ಅತ್ತರು; ಗೋಳಾಡಿದರು. ತಮ್ಮ ಚಿತ್ತವನ್ನು ದೇವರ ಮೇಲೆ ಕೇಂದ್ರೀಕರಿಸಲು ಅವರಿಗೆ ಕೆಲವು ಸಲ ಅಸಾಧ್ಯವಾಗಿ ಕಂಡು ಬಂದದ್ದೇ ಇದಕ್ಕೆ ಕಾರಣವಾಗಿತ್ತು. ದೇವರ ಬಗೆಗಿಂತ ಹೆಚ್ಚಾಗಿ ಇಂದ್ರಿಯ ಸುಖಗಳ ಬಗೆಗೆ ಚಿಂತಿಸುವುದನ್ನೇ ತಮ್ಮ ಮನಸ್ಸು ಹೆಚ್ಚು ಹೆಚ್ಚು ಬಯಸುತ್ತಿದೆಯೆಂದು ಅವರಿಗನಿಸಿತು.

ಅಂದಣವನೇರಿದ ಸೊಣಗನಂತೆ
ಕಂಡೊಡೆ ಬಿಡದು ಮುನ್ನಿನ ಸ್ವಭಾವವನು -
ಸುಡು! ಸುಡು!! ಮನವಿದು ವಿಷಯಕ್ಕೆ ಹರಿವುದು;
ಮೃಡ, ನಿಮ್ಮನನುದಿನ ನೆನೆಯಲೀಯದು.
ಎನ್ನೊಡೆಯೆ, ಕೂಡಲ ಸಂಗಮದೇವಾ,
ನಿಮ್ಮ ಚರಣವ ನೆನೆವಂತೆ ಕರುಣಿಸು,
ಸೆರಗೊಡ್ಡಿ ಬೇಡುವೆ, ನಿಮ್ಮ ಧರ್ಮ!

ತನ್ನಿಚ್ಛೆಯ ನುಡಿದರೆ ನಚ್ಚುವುದೀ ಮನವು;
ಇದಿರಿಚ್ಛೆಯ ನುಡಿದರೆ ಮೆಚ್ಚದೀಮನವು
ಕೂಡಲ ಸಂಗನ ಶರಣರ

ನಚ್ಚದ ಮನವ ಕಿಚ್ಚಿನೊಳಗಿಕ್ಕುವೆ!

ಆಸೆಯಾಮಿಷ ತಾಮಸ, ಹುಸಿ, ವಿಷಯ,
ಕುಟಿಲ,ಕುಹಕ, ಕ್ರೋಧ, ಕ್ಷುದ್ರ,ಮಿಥ್ಯೆ -
ಇವನೆನ್ನ ನಾಲಗೆಯ ಮೇಲಿಂದತ್ತ ತೆಗೆದು ಕಳೆಯಯ್ಯಾ,
ಅದೇಕೆಂದೊಡೆ ನಿಮ್ಮತ್ತಲೆನ್ನ ಬರಲೀಯವು.
ಇದು ಕಾರಣ, ಇವೆಲ್ಲವ ಕಳೆದು
ಎನ್ನ ಪಂಚಯ್ಯುವರ ಭಕ್ತರ ಮಾಡು,
ಕೂಡಲಸಂಗಮದೇವಾ.

ವಿಷಯವೆಂಬ ಹಸುರನೆನ್ನ ಮುಂದೆ ತಂದು ಪಸರಿಸಿದೆಯಯ್ಯಾ;
ಹಸುವೇನ ಬಲ್ಲದು? ಹಸುರೆಂದೆಳಸುವುದು.
ವಿಷಯರಹಿತನ ಮಾಡಿ ಭಕ್ತಿರಸವ ದಣಿಯೆ ಮೇಯಿಸಿ,
ಸುಬುದ್ಧಿಯೆಂಬುದಕವನೆರೆದು
ನೋಡಿ ಸಲಹಯ್ಯಾ, ಕೂಡಲಸಂಗಮದೇವಾ.

ಕೆಸರಲ್ಲಿ ಬಿದ್ದ ಪಶುವಿನಂತಾನು
ದೆಸೆದೆಸೆಗೆ ಬಾಯ ಬಿಡುತ್ತಿದ್ದೇನಯ್ಯಾ,
ಅಯ್ಯಾ! ಆರಯ್ಯುವರಿಲ್ಲ-ಅಕಟಕಟಾ!-
ಪಶುವೆಂದೆನ್ನ ಕೂಡಲಸಂಗಮದೇವ
ಕೊಂಬ ಹಿಡಿದೆತ್ತುವನ್ನಕ್ಕ.

ಬಸವಣ್ಣನವರು ತಮ್ಮನ್ನು ಮಾನಸಿಕವಾಗಿ ಪರಿಶುದ್ಧರನ್ನಾಗಿ ಇರಿಸಿಕೊಳ್ಳಲು ಹೆಣಗಿದ ಬಗೆಯನ್ನು ಈ ವಚನಗಳೂ ಇತರ ವಚನಗಳೂ ತಿಳಿಸುತ್ತವೆ. ತನ್ನನ್ನು ತಿದ್ದಿಕೊಂಡ ವ್ಯಕ್ತಿಗೆ ಮಾತ್ರ ಇತರರನ್ನು ತಿದ್ದಲೂ ಸುಧಾರಕನಾಗಲೂ ಸಾಧ್ಯ ಎಂದು ಅವರಿಗೆ ತಿಳಿದಿತ್ತು.

ದೇವರತ್ತ ಕರೆದೊಯ್ಯುವ ಅನೇಕ ಮಾರ್ಗಗಳಲ್ಲಿ ಬಸವಣ್ಣನವರಿಗೆ ಹೆಚ್ಚು ಪ್ರಿಯವಾದುದು ಭಕ್ತಿಮಾರ್ಗವಾಗಿತ್ತು. ವೇದಮಂತ್ರಗಳ ಪಾರಾಯಣ ಮಾಡುವುದರಿಂದ ದೇವರನ್ನು ಮೆಚ್ಚಿಸಲು ಸಾಧ್ಯವಿಲ್ಲ; ಭಕ್ತಿಯಿಂದ ಮಾತ್ರ ಇದು ಸಾಧ್ಯ ಎಂದು ಅವರು ಹೇಳಿದ್ದಾರೆ.

ನಾದಪ್ರಿಯ ಶಿವನೆಂಬರು - ನಾದ ಪ್ರಿಯ ಶಿವನಲ್ಲವಯ್ಯಾ;
ವೇದಪ್ರಿಯ ಶಿವನೆಂಬರು - ವೇದಪ್ರಿಯ ಶಿವನಲ್ಲವಯ್ಯಾ;
ನಾದವ ಮಾಡಿದ ರಾವಳಂಗೆ ಅರೆಯಾಯುಷ್ಯವಾಯಿತ್ತು!
ವೇದವನೋದಿದ ಬ್ರಹ್ಮನ ಶಿರ ಹೋಯಿತ್ತು!

ನಾದಪ್ರಿಯನೂ ಅಲ್ಲ, ವೇದಪ್ರಿಯನೂ ಅಲ್ಲ;
ಭಕ್ತಿ ಪ್ರಿಯ ನಮ್ಮ ಕೂಡಲ ಸಂಗಮದೇವ.

'ನಾರದ ಭಕ್ತಿ ಸೂತ್ರ'ದ ಪ್ರಕಾರ, ಭಕ್ತಿಯೆಂದರೆ ದೇವರ ಬಗೆಗಿರುವ ನಿರಂತರವಾದ ಪ್ರೇಮ. ಭಕ್ತಿಯೆಂಬುದು ಅನಂತತೆಯ ಕೃಪೆಗಾಗಿ ಇರುವ ನಿರಂತರವಾದ ಹಾಗೂ ಏಕಪ್ರಕಾರವಾದ ಹಂಬಲ ಮತ್ತು ತೃಷ್ಣೆ. ಪ್ರೇಮದೊಡನೆ ಪ್ರಾರ್ಥಿಸುವ ಹಾಗೂ ಹೃತ್ಪೂರ್ವಕವಾಗಿ ದೇವರನ್ನು ಪ್ರೀತಿಸುವ ವ್ಯಕ್ತಿಗೆ ಮಾತ್ರ ದೈವಾನುಗ್ರಹ ಲಭಿಸುತ್ತದೆ.

ಬಸವಣ್ಣನವರು ತಮ್ಮೆಲ್ಲ ಐಹಿಕ ಸುಖಗಳನ್ನೂ ತೊರೆದು, ಪರಮಾತ್ಮನೇ ತಮ್ಮ ಸರ್ವಸ್ವವಾಗಿರುವ ಕೂಡಲಸಂಗಮಕ್ಕೆ ಬಂದರೆಂಬುದನ್ನು ನಾವು ಹಿಂದೆಯೇ ನೋಡಿದ್ದೇವೆ.

ತಂದೆ ನೀನು, ತಾಯಿ ನೀನು,
ಬಂಧು ನೀನು, ಬಳಗ ನೀನು;
ನೀನಲ್ಲದೆ ಮತ್ತಾರೂ ಇಲ್ಲಯ್ಯಾ!
ಕೂಡಲ ಸಂಗಮದೇವಾ,
ಹಾಲಲದ್ದು, ನೀರಲದ್ದು!
ಎನ್ನಾಪತ್ತು - ಸುಖ - ದುಃಖ ನೀನೇ, ಕಂಡಯ್ಯಾ!
ಮತ್ತಾರೂ ಇಲ್ಲ. ಹರ ಹರಾ! ನೀನೇ ಕಂಡಯ್ಯಾ!
ಎನ್ನ ಮಾತಾಪಿತರೂ ನೀನೇ ಕಂಡಯ್ಯಾ
ಕೂಡಲ ಸಂಗಮದೇವಾ!

'ಅಡವಿಯೊಳು ಹೊಲಬುಗೆಟ್ಟ ಶಿಶುವಿನಂತೆ' ಬಸವಣ್ಣನವರು ದೇವರಿಗಾಗಿ ಅತ್ತರು, ಗೋಳಾಡಿದರು.

'ಅಯ್ಯಾ, ಅಯ್ಯಾ' ಎಂದು ಕರೆಯುತ್ತಲಿದ್ದೇನೆ;
'ಅಯ್ಯಾ, ಅಯ್ಯಾ' ಎಂದೊರಲುತ್ತಲಿದ್ದೇನೆ;
'ಓ' ಎನ್ನಲಾಗದೆ ಅಯ್ಯಾ?
ಆಗಳೂ ನಿಮ್ಮುವ ಕರೆಯುತ್ತಲಿದ್ದೇನೆ;
ಮೌನವೇ, ಕೂಡಲಸಂಗಮದೇವಾ?

ದೇವರ ಮೌನ ಬಸವಣ್ಣನವರಿಗೊಂದು ರಹಸ್ಯವಾಗಿತ್ತು. ದೇವರನ್ನು ಕಾಣುವುದು ತಮಗೆಂದಾದರೂ ಸಾಧ್ಯವಾದೀತೇ ಎಂದು ಅವರು ಆಶ್ಚರ್ಯಪಟ್ಟರು. ಕೆಲವು ಸಲ ಅವರು ನಾಸ್ತಿಕ ಭಾವನೆಯನ್ನು ಬೆಳೆಸಿಕೊಂಡುದೂ ಉಂಟು; ನಿರಾಶೆಯ ಭಾವನೆಯೂ ಅವರನ್ನು ಕವಿದುದುಂಟು. ಹೀಗಿದ್ದರೂ ಅವರು ಆಸೆಯನ್ನು ಬಿಡದೆ, ಪರಮಾತ್ಮ ತಮ್ಮ ಭಕ್ತಿಯನ್ನು ಪರೀಕ್ಷಿಸುತ್ತಿದ್ದಾನೆಂಬ ಆಲೋಚನೆಯಿಂದ ತಮ್ಮನ್ನು ತಾವೇ ಸಂತೈಸಿಕೊಂಡರು.

ನಚ್ಚಿದೆನೆಂದರೆ, ಮೆಚ್ಚಿದೆನೆಂದರೆ, ಸಲೆ ಮಾರುವೋದೆನೆಂದರೆ,
ತನುವನಲ್ಲಾಡಿಸಿ ನೋಡುವೆ ನೀನು,
ಮನವನಲ್ಲಾಡಿಸಿ ನೋಡುವೆ ನೀನು,
ಧನವನಾಲ್ಲಾಡಿಸಿ ನೋಡುವೆ ನೀನು,
ಇದಕ್ಕೆಲ್ಲ ಅಂಜದಿದ್ದರೆ ಭಕ್ತಿಕಂಪಿತ ನಮ್ಮ ಕೂಡಲ ಸಂಗಮದೇವ!

ಮನುಷ್ಯನನ್ನು ಸ್ವೀಕರಿಸುವ ಮೊದಲು ದೇವರು ಅವನನ್ನು ಪರೀಕ್ಷಿಸುತ್ತಾನೆ. ದೇವರು 'ಭಕ್ತಿ ಕಂಪಿತ'. ಪರಮಾತ್ಮನನ್ನು ಎಂದಾದರೂ ಅರಿಯುವೆನೆಂಬ ಬಗ್ಗೆ ಬಸವಣ್ಣನವರಲ್ಲಿ ಇದೇ ಭಾವನೆ ಆಶಾಭಾವನೆಯನ್ನು ಮೂಡಿಸಿತ್ತು.

ಘರ್ಷಣೆ, ನಿರಾಶೆ ಹಾಗೂ ಅನಂತರ ನಿರಾಶೆಯ ಮೂಲಕ ಕಾಣಿಸಿಕೊಂಡ ಆಶಾರೇಖೆ - ಇವೆಲ್ಲವೂ ಶಿವನ ಚರಣಗಳಿಗೆ ಬಸವಣ್ಣನವರು ಹೆಚ್ಚು ಹೆಚ್ಚು ಅಂಟಿಕೊಳ್ಳುವಂತೆ ಮಾಡಿದವು. ಈ ಘಟ್ಟದಲ್ಲಿ ಬಸವಣ್ಣನವರಿಗೆ ಶಿವನೇ ಪರಮದೇವತೆಯಾಗಿದ್ದ. ಅವರ ದೃಷ್ಟಿಯಲ್ಲಿ ಶಿವನಲ್ಲದೆ ಇನ್ನಾವ ದೇವರೂ ಇರಲಿಲ್ಲ. ಇತರ ಎಲ್ಲ ದೇವತೆಗಳೂ ಶಿವನಿಗೆ ಅಧೀನರಾಗಿದ್ದರು.

ನಾವು ನೋಡಿದಂತೆ, ಬಸವಣ್ಣನವರು ಆಧ್ಯಾತ್ಮಿಕ ಸಾಧಕರಷ್ಟೇ ಆಗಿರದೆ, ಸಾಮಾಜಿಕ ಹಾಗೂ ಧಾರ್ಮಿಕ ವ್ಯವಹಾರಗಳಲ್ಲಿಯೂ ಸಿಲುಕಿಕೊಂಡಂತಹ ಬುದ್ಧಿಜೀವಿ ಕೂಡ ಆಗಿದ್ದರು. ಅವರು ಲೌಕಿಕ ಹಾಗೂ ಪಾರಲೌಕಿಕ ಎಂಬ ಎರಡೂ ಲೋಕಗಳಲ್ಲಿ ಜೀವಿಸುತ್ತಿದ್ದರು. ಇವೆರಡು ಲೋಕಗಳೂ ಅವರನ್ನು ತಮ್ಮತ್ತ ಸೆಳೆಯುವ, ಪರಸ್ಪರ ವಿರುದ್ಧ ಮುಖಿಗಳಾದ ಬಲಗಳಾಗಿದ್ದು ಇವುಗಳ ನಡುವೆ ಬಸವಣ್ಣನವರು ಸಿಲುಕಿಕೊಂಡಂತೆ ಕಾಣುತ್ತಿತ್ತು. ಸುಂದರವಾದ ಉಪಮೆಯೊಂದರ ಮೂಲಕ ತಮ್ಮ ಅಸಹಾಯಕತೆಯ ಈ ಪರಿಸ್ಥಿತಿಯನ್ನು ಬಸವಣ್ಣನವರು ವ್ಯಕ್ತಪಡಿಸಿದ್ದಾರೆ. ' ಕಾಲಲಿ ಕಟ್ಟಿದ ಗುಂಡು, ಕೊರಳಲಿ ಕಟ್ಟಿದ ಬೆಂಡು; ತೇಲಲೀಯದು ಗುಂಡು, ಮುಳುಗಲೀಯದು ಬೆಂಡು'' ಎಂದ ಬಸವಣ್ಣನವರು ಇಂಥ ಸ್ಥಿತಿಯಲ್ಲಿ ತೇಲಲೂ ಸಾಧ್ಯವಾಗದೆ, ಮುಳುಗಲೂ ಸಾಧ್ಯವಾಗದೆ ಒದ್ದಾಡುವ ಈಜುಗಾರನಿಗೆ ತಮ್ಮನ್ನು ಹೋಲಿಸಿಕೊಂಡಿದ್ದಾರೆ.

ಯಾತನೆಯಿಂದ ಕೂಡಿದ ಅಂಧಕಾರದಿಂದಲೇ, ದಿವ್ಯ ಪ್ರಕಾಶ ಮೂಡಿಬಂತು. ಬಸವಣ್ಣನವರ ಕರೆಗೆ ಓಗೊಟ್ಟು ಶಿವನು ತನ್ನ ದರ್ಶನ ಸುಖವನ್ನು ಅವರು ಅನುಭವಿಸುವಂತೆ ಮಾಡಿದ. ದೇವರು ತಮ್ಮೊಳಗೇ ಇದ್ದಾನೆಂಬುದು ತಿಳಿದು ಬಂದಾಗ ಬಸವಣ್ಣನವರಿಗೆ ಆಶ್ಚರ್ಯವುಂಟಾಯಿತು. ಅದೊಂದು ಮಹಾ ಅನುಭವವೂ ಹರ್ಷೋನ್ಮಾದವೂ ಆಗಿತ್ತು. ''ನೋಟವನಂತ ಸುಖ; ಕೂಟ ಪರಮ ಸುಖ'' ಎಂದು ಅವರು ಉದ್ಗರಿಸಿದ್ದಾರೆ.

ತಮ್ಮ ಸಾಧನೆಯ ಪ್ರಾರಂಭದಲ್ಲಿ ದೇವರನ್ನು ತಮ್ಮ ಪ್ರಭುವಾಗಿಯೂ ತಮ್ಮನ್ನು ಅವನ ದಾಸನಾಗಿಯೂ ಬಸವಣ್ಣನವರು ಭಾವಿಸಿಕೊಂಡಿದ್ದರು. ಅಲ್ಲದೆ ದೇವರನ್ನು ಅವರು ತಮ್ಮ 'ಪತಿ' ಯಾಗಿ ಹಾಗೂ ತಮ್ಮನ್ನು ಆ ದೇವನ ಪ್ರೇಯಸಿಯಾಗಿ ಭಾವಿಸಿಕೊಂಡದ್ದೂ ಉಂಟು. ವೀರಶೈವ ಧರ್ಮ 'ಶರಣಸತಿ' ಹಾಗೂ 'ಲಿಂಗಪತಿ'ಯ ಪಥವನ್ನು ಎತ್ತಿಹಿಡಿಯುತ್ತದೆ. ಭಕ್ತ - ಗಂಡಸಾಗಲಿ, ಹೆಂಗಸಾಗಲಿ - ತನ್ನನ್ನೂ ಪತ್ನಿಯ ಸ್ಥಾನದಲ್ಲಿ ಇರಿಸಿಕೊಂಡು ದೇವರನ್ನು ಪತಿಯೆಂದು ಭಾವಿಸಿ ಆರಾಧಿಸುವುದೇ ಇದರ ಅರ್ಥ. ಮೇಲೆ ಹೇಳಲಾದ 'ಮಧುರ ಭಾವ'ದ ಪಥದಲ್ಲಿ ಸಾಗುತ್ತಿದ್ದಾಗಲೇ ಬಸವಣ್ಣನವರು ಕೆಲವು ಸೊಗಸಾದ ವಚನಗಳನ್ನು ರಚಿಸಿದ್ದಾರೆ. ಅವರು ನಿಷ್ಠಾವಂತ 'ಪತ್ನಿ'ಯ ಬದುಕನ್ನು ಸಾಗಿಸಿದರು ಹಾಗೂ ಆ ರೀತಿಯಲ್ಲಿ ತಮ್ಮ 'ಪತಿ'ಯ ಪ್ರೇಮವನ್ನು ಸಂಪಾದಿಸಲು ಶಕ್ತರಾದರು.

ಪರಮಾತ್ಮನು ತಮ್ಮೊಳಗಿರುವುದಷ್ಟೇ ಅಲ್ಲದೆ, ತಾವೇ ಸ್ವತಃ ದೇವರು ಎಂಬ ಭಾವನೆಯುಂಟಾದಾಗ, ಬಸವಣ್ಣನವರಿಗೆ ತಾನು ಎಲ್ಲ ಅನುಭವಗಳ ಮಹೌನ್ನತ್ಯವನ್ನು ತಲುಪಿದ್ದೇನೆ ಎಂಬ ಭಾವನೆಯುಂಟಾಯಿತು.

ಘನ ಗಂಭೀರ ಮಹಾಘನದೊಳಗಿನ ಘನಕ್ಕೆ
ಘನವಾಗಿದ್ದೆನಯ್ಯಾ,
ಕೂಡಲಸಂಗಮದೇವಯ್ಯನೆಂಬ ಮಹಾ ಬೆಳಗಿನ ಬೆಳಗಿನೊಳಗಿದ್ದೇನೆಂಬ
ಶಬ್ದ ಮುಗ್ಧವಾದುದೇನೆಂಬೆನಯ್ಯಾ?

ವೀರಶೈವ ಅನುಭಾವಿಗಳು ಅನುಭವಿಸಿದಂತಹ ಹಾಗೂ ಅಭಿವ್ಯಕ್ತಿಗೊಳಿಸಿದಂತಹ ಆಧ್ಯಾತ್ಮಿಕ ವಿಕಾಸದ ಕಲ್ಪನೆಯನ್ನು ಹೊಂದುವುದು ಅಗತ್ಯ. ಅವರ ಅಭಿಪ್ರಾಯದ ಪ್ರಕಾರ, ಈ ವಿಕಾಸ ಆರು ಘಟ್ಟಗಳಲ್ಲಿ (ಹಂತ) ನಡೆಯುತ್ತದೆ. ಪ್ರತಿಯೊಂದು ಘಟ್ಟವೂ ಸಾಧಕನ ಮಾನಸಿಕ ಸ್ಥಿತಿಯ ಪ್ರತಿಬಿಂಬವಾಗಿದ್ದು ಈ ಘಟ್ಟಗಳನ್ನು 'ಷಟ್‌ಸ್ಥಲ'ಗಳೆಂದು ಕರೆಯಲಾಗಿದೆ. ಇವೇ ಭಕ್ತಸ್ಥಲ, ಮಾಹೇಶ್ವರಸ್ಥಲ, ಪ್ರಸಾದಿಸ್ಥಲ, ಪ್ರಾಣಲಿಂಗಿಸ್ಥಲ, ಶರಣಸ್ಥಲ ಹಾಗೂ ಐಕ್ಯಸ್ಥಲ.

**ಭಕ್ತ** - ಈ ಸ್ಥಲದಲ್ಲಿ ಭಕ್ತನು ಪ್ರಭುವಿನ ದಾಸನಾಗಿರುತ್ತಾನೆ. ಇಲ್ಲಿಯೇ ಅವನ ಆಧ್ಯಾತ್ಮಿಕ ತರಬೇತಿ ಪ್ರಾರಂಭವಾಗುತ್ತದೆ.

**ಮಾಹೇಶ್ವರ** - ಈ ಸ್ಥಲದಲ್ಲಿ ಭಕ್ತನು ತನ್ನ ಸ್ವಂತ ದೇವರನ್ನಲ್ಲದೆ ಇನ್ನಾವ ದೇವರನ್ನು ಗುರುತಿಸಲು ಸಿದ್ಧನಾಗಿರುವುದಿಲ್ಲ.

**ಪ್ರಸಾದಿ** - ಸಾಧಕನು ನಿಧಾನವಾಗಿ ದೈವಾನುಗ್ರಹಕ್ಕೆ ಪಾತ್ರನಾಗತೊಡಗುತ್ತಾನೆ. ಅವನಲ್ಲಿ ಆಶಾಭಾವನೆ ಮೂಡುತ್ತದೆ.

**ಪ್ರಾಣಲಿಂಗಿ** - ಧ್ಯಾನ ಮಾಡುವಾಗ ತನ್ನ ಅಂಗೈಯ ಮೇಲೆ ಇರಿಸಿಕೊಳ್ಳುವ ಇಷ್ಟಲಿಂಗದಲ್ಲಿ ಪ್ರಭು ಸದಾಕಾಲವೂ ನೆಲಸಿರುವನೆಂದು ಭಕ್ತನು

ಭಾವಿಸುತ್ತಾನೆ. ಆದರೆ ಈ ಸ್ಥಲದಲ್ಲಿ ದೇವರು ತನ್ನೊಳಗೂ ಇರುವನೆಂಬ ಅನಿಸಿಕೆ ಅವನಿಗೆ ಉಂಟಾಗುತ್ತದೆ.

**ಶರಣ** - ಇಲ್ಲಿ ಭಕ್ತನು ತನ್ನ ಸಂಕಲ್ಪವನ್ನು ಪ್ರಭುವಿಗೆ ಸಂಪೂರ್ಣವಾಗಿ ಒಪ್ಪಿಸುತ್ತಾನೆ. ವ್ಯಕ್ತಿತ್ವವನ್ನು ನಿಧಾನವಾಗಿ ತೊಡೆದು ಹಾಕುವುದನ್ನು ಇದು ಸೂಚಿಸುತ್ತದೆ.

**ಐಕ್ಯ** - ಈ ಸ್ಥಲದಲ್ಲಿ, ಹಿಂದೆ ಪ್ರತ್ಯೇಕ ಅಸ್ತಿತ್ವವನ್ನು ಹೊಂದಿದ್ದ ಭಕ್ತನು ಅದನ್ನು ಕಳೆದುಕೊಂಡು ಪರಮಾತ್ಮನೇ ಆಗುತ್ತಾನೆ.

ಮೊದಲಸ್ಥಲವೇ 'ದಾಸೋಹಂ' ಮತ್ತು ಕೊನೆಯ ಸ್ಥಲವೇ 'ಸೋಹಂ', ಅನುಭಾವಿ ಮಾನಸಿಕ ಇತಿಹಾಸದ ವಿಕಾಸದಲ್ಲಿನ ಈ ಆರು ಸ್ಥಲಗಳು, ಬಸವಣ್ಣನವರು ಹಾಗೂ ಅವರ ಸಂಗಡಿಗರಾದ ಶರಣರ ಸಾಧನೆಯ ಕಾಲ ದಲ್ಲಿನ ನೈಜ ಅನುಭವಗಳನ್ನು ಆಧರಿಸಿದೆ. ಅನಂತರದ ಸಂಗ್ರಹಕಾರರಿಂದ ಈ ಆರು ಸ್ಥಲಗಳಿಗೆ ಅನುಸಾರವಾಗಿ ಬಸವಣ್ಣನವರು ಹಾಗೂ ಇತರ ಶರಣರ ವಚನಗಳು ವ್ಯವಸ್ಥಿತವಾಗಿ ಕ್ರೋಢೀಕರಿಸಲ್ಪಟ್ಟಿರುವುದನ್ನು ಗಮನಿಸಬೇಕಾದುದು ಇಲ್ಲಿ ಮುಖ್ಯ. ಆದುದರಿಂದ ಶರಣರ ವಚನಗಳನ್ನು ಕೆಲವು ಸಲ 'ಷಟ್‌ಸ್ಥಲದ ವಚನಗಳು' ಎಂದು ಕರೆಯುವುದೂ ಉಂಟು.

ಬಸವಣ್ಣನವರ ಜೀವನ ಒಂದು ತೆರೆದ ಪುಸ್ತಕವಾಗಿತ್ತು. ತಮ್ಮ ಸಂಗಡಿಗರಿಂದಾಗಲಿ, ಅನುಯಾಯಿಗಳಿಂದಾಗಲಿ ಅವರು ಏನನ್ನೂ ಬಚ್ಚಿಟ್ಟು ಕೊಂಡಿರಲಿಲ್ಲ. ತಮ್ಮ ಆಧ್ಯಾತ್ಮಿಕ ವಿಕಾಸವನ್ನು ಹಂತ ಹಂತವಾಗಿ ಪ್ರಕಟ ಪಡಿಸುವ ಬಸವಣ್ಣನವರ ವಚನಗಳನ್ನು ಗಾಜಿನ ಸಂಪುಟದಲ್ಲಿ ಇರಿಸಿದ ಜೇನುಗೂಡಿನ ತುಂಬ ಇರುವ ಜೇನುನೊಣಗಳ ಗುಂಪಿಗೆ ಹೋಲಿಸ ಬಹುದು. ಅವರ ಎಲ್ಲ ಮಾನಸಿಕ ಚಟುವಟಿಕೆಗಳನ್ನೂ ಹೊರಗಿನಿಂದಲೇ ವೀಕ್ಷಿಸಲು ಸಾಧ್ಯವಾಗಿತ್ತು. ಬಸವಣ್ಣನವರು ತಮ್ಮ ಕುಂದುಕೊರತೆಗಳನ್ನು ಮುಚ್ಚುಮರೆಯಿಲ್ಲದೆ ವ್ಯಕ್ತಪಡಿಸಿದರು ಹಾಗೂ ಅವುಗಳಿಗಾಗಿ ಪ್ರಾಮಾಣಿಕ ವಾಗಿ ಪಶ್ಚಾತ್ತಾಪಪಟ್ಟರು. ಉದಾಹರಣೆಗೆ, ತಾನು ಜನ್ಮತಃ ಬ್ರಾಹ್ಮಣನೆಂಬ ಸಂಗತಿ ಹಾಗೂ ತಾನು ಒಬ್ಬ ಉನ್ನತ ಅಧಿಕಾರಿಯಾಗಿದ್ದೇನೆ ಎಂಬ ಸಂಗತಿ, ಇವು ಕೆಲವು ಸಲ ಅವರನ್ನು ತಾನು ಇತರರಿಗಿಂತ ಶ್ರೇಷ್ಠ ಎಂದು ಭಾವಿಸು ವಂತೆ ಮಾಡಿದ್ದುವು. ಅವರನ್ನು ಮೆಚ್ಚಿದ ಜನರು ಮಾಡಿದ ಅತಿ ಸ್ತುತಿ ಯಿಂದಾಗಿ ಅವರ 'ಅಹಂ' ಬೆಳೆಯಿತು. ಈ ವಿಚಾರಗಳ ಅರಿವು ಬಸವಣ್ಣನವರಿಗಿತ್ತು. ಅವರಿದನ್ನು ತಮ್ಮ ಸಂಗಡಿಗರಿಗೂ ತಿಳಿಸಿದ್ದರು. ಇತರರಿಂದ ಮಾರ್ಗದರ್ಶನ ಪಡೆಯಲು ಅವರು ಸದಾ ಸಿದ್ಧರಾಗಿದ್ದರು. ಮೆಚ್ಚುವ ಜನರು ಹೊಗಳಿದಾಗ ಅವರು ಹೀಗೆಂದರು:

ಎನ್ನಿಂದ ಕಿರಿಯರಿಲ್ಲ; ಶಿವ ಭಕ್ತರಿಂದ ಹಿರಿಯರಿಲ್ಲಾ
ನಿಮ್ಮ ಪಾದಸಾಕ್ಷಿ, ಎನ್ನ ಮನ ಸಾಕ್ಷಿ!

ಕೂಡಲ ಸಂಗಮ ದೇವಾ, ಎನಗಿದೇ ದಿವ್ಯ!

ತಮ್ಮನ್ನು ಸಮಾಜ ಸೇವಕನೆಂದೂ, ಪಹರೆಗಾರನೆಂದೂ, ಝಾಡಮಾಲಿಯೆಂದೂ ಅವರು ಕರೆದುಕೊಂಡಿದ್ದಾರೆ.

ತಮ್ಮ ಮನೆಯಲ್ಲಿ ನಡೆಯುತ್ತಿದ್ದ ಧಾರ್ಮಿಕ ಚರ್ಚೆಗಳಲ್ಲಿ ಬಸವಣ್ಣನವರು ಎಂದೂ ಮುಂದಿನ ಪೀಠದಲ್ಲಿ ಕುಳಿತುಕೊಳ್ಳುತ್ತಿದ್ದಿರಲಿಲ್ಲ. ಚರ್ಚೆಗಾಗಿ ಮುಂದೆ ಬರುವಂತೆ ಇತರರು ಅವರನ್ನು ಪ್ರಾರ್ಥಿಸಿಕೊಂಡರೂ ಕೈಗಳಿಂದ ಬಾಯಿ ಮುಚ್ಚಿಕೊಂಡು ಪಿಸುದನಿಯಲ್ಲಿ 'ಕ್ಷಮಿಸಿ' ಎನ್ನುತ್ತಿದ್ದರು. ಮತ್ತು ಹಿಂದೆಯೇ ಕುಳಿತುಕೊಳ್ಳುತ್ತಿದ್ದರು. ಅವರು ಹಿತಕರ ನಡವಳಿಕೆಯಿಂದ ಕೂಡಿದ ಸುಸಂಸ್ಕೃತ ವ್ಯಕ್ತಿಯಾಗಿದ್ದರು. ಅತಿಥಿಗಳಿಗೆ ಸೌಜನ್ಯ ತೋರಿಸುವುದನ್ನು ಅವರು ತಮ್ಮ ಅನುಯಾಯಿಗಳಿಗೆ ಕಲಿಸಿದ್ದರು. "ಅತಿಥಿಗಳಿಗೆ ಏನನ್ನೂ ನೀಡಲು ನಿಮಗೆ ಸಾಧ್ಯವಿಲ್ಲದೆ ಹೋದ ಪಕ್ಷದಲ್ಲಿ ಕನಿಷ್ಠ ಪಕ್ಷ ಅವರೊಂದಿಗೆ ಒಳ್ಳೆಯ ಮಾತುಗಳನ್ನಾದರೂ ಆಡಿ; (ಇದಕ್ಕೆ ನೀವೇನೂ ಬೆಲೆ ತೆರಬೇಕಾಗಿಲ್ಲ)" ಎಂದಿದ್ದಾರೆ ಬಸವಣ್ಣನವರು.

'ಏನು ಬಂದಿರಿ, ಹದುಳವಿದ್ದರೆ?' ಎಂದರೆ
ನಿಮ್ಮ ಮೈಸಿರಿ ಹಾರಿಹೋಹುದೆ?
'ಕುಳ್ಳಿರೆಂ'ದರೆ ನೆಲಕುಳಿಹೋಹುದೆ?
ಒಡನೆ ನುಡಿದರೆ ಶಿರ - ಹೊಟ್ಟೆಯೊಡೆವುದೆ?
ಕೊಡಲಿಲ್ಲದಿದ್ದರೊಂದು ಗುಣವಿಲ್ಲದಿರ್ದಡೆ,
ಕೆಡಹಿ ಮೂಗ ಕೊಯ್ವದೆ ಮಾಣ್ಬನೆ ಕೂಡಲಸಂಗಮದೇವನು?

ಮಾತಿನಲ್ಲಾಗಲಿ ಕೃತಿಯಲ್ಲಾಗಲಿ ಯಾವುದೇ ಸ್ವರೂಪದ ಹಿಂಸೆಗೆ ಬಸವಣ್ಣನವರು ವಿರೋಧಿಯಾಗಿದ್ದರು.

ಪುಣ್ಯಪಾಪವೆಂಬುವು ತಮ್ಮಿಷ್ಟ ಕಂಡಿರೇ
'ಅಯ್ಯಾ' ಎಂದಡೆ ಸ್ವರ್ಗ, 'ಎಲೆವೋ' ಎಂದಡೆ ನರಕ!
'ದೇವಾ, ಭಕ್ತ ಜಯಾ, ಜೀಯಾ' ಎಂಬ ನುಡಿಯೊಳಗೆ
ಕೈಲಾಸವಿದ್ದುದೇ ಕೂಡಲಸಂಗಮದೇವಾ.

ಬಸವಣ್ಣನವರ ಸಮಕಾಲೀನನಾದ ಮರುಳಶಂಕರ "ಬಸವಣ್ಣ ನಡೆದುದೇ ಮಾರ್ಗ, ಅಖಿಳ ಗಣಂಗಳಿಗೆ, ಬಸವಣ್ಣ ನುಡಿದುದೇ ವೇದ" ಎಂದು ನುಡಿದಿದ್ದಾನೆ. ಬಸವಣ್ಣನವರ ಇನ್ನೊಬ್ಬ ಸಮಕಾಲೀನನಾದ ಅಲ್ಲಮಪ್ರಭು ಅವರನ್ನು "ಸ್ವರ್ಗಕ್ಕೆ ಕರೆದುಕೊಂಡು ಹೋಗುವ ಏಣಿ" ಎಂದು ವರ್ಣಿಸಿದ್ದಾನೆ. ಸಂಗಡಿಗರು ಅವರನ್ನು ಮಾರ್ಗದರ್ಶಕನೆಂದೂ ದಾರ್ಶನಿಕನೆಂದೂ ಭಾವಿಸಿದ್ದರು. ಅವರ ದೃಷ್ಟಿಯಲ್ಲಿ ಬಸವಣ್ಣನವರು ಮಹಾಕ್ರಾಂತಿಯೊಂದರ ಸಂಕೇತವಾಗಿದ್ದರು. ಬಸವಣ್ಣನವರು ಜೀವಿಸಿದ್ದ ಕಾಲದಲ್ಲಿಯೇ ಅವರ ಬಗೆಗೆ ಹಲವು ಪವಾಡಗಳು ಹುಟ್ಟಿಕೊಂಡಿದ್ದವು. ಆದರೆ ಜನರ

ಚಿಂತನ ವಿಧಾನದಲ್ಲಿಯೇ ಕ್ರಾಂತಿಯೊಂದನ್ನುಂಟು ಮಾಡಲು ಅವರು ಸಮರ್ಥರಾದರೆಂಬ ವಾಸ್ತವ ವಿಚಾರವೇ ನಮ್ಮ ದೃಷ್ಟಿಯಲ್ಲಿ ಒಂದು ದೊಡ್ಡ ಪವಾಡವಾಗಿದೆ.

# 8. ಬಸವಣ್ಣನವರು, ಅವರ ಸಮಕಾಲೀನರು

ಹನ್ನೆರಡನೆಯ ಶತಮಾನದ ಸಾಮಾಜಿಕ-ಆರ್ಥಿಕ ಕ್ರಾಂತಿಯನ್ನು ಬಸವಣ್ಣನವರ ಕ್ರಾಂತಿಯೆಂದು ನಾವು ಕರೆಯುವುದಾದರೆ, ಬಸವಣ್ಣನವರು ಅದರ ಮುಖಂಡರೆಂದು ಒಪ್ಪಿಕೊಳ್ಳಲಾಗಿದೆ ಹಾಗೂ ಅದರ ಯಶಸ್ಸಿನ ಬಹುಪಾಲು ಕೀರ್ತಿಗೆ ಅವರೇ ಕಾರಣರೆಂಬ ವಸ್ತುಸ್ಥಿತಿಯನ್ನು ಒತ್ತಿ ಹೇಳಿದಂತಷ್ಟೇ ಆಗುತ್ತದೆ. ಬೇರೆ ರೀತಿಯಲ್ಲಿ ಹೇಳುವುದಾದರೆ, ಈ ಮಾತಿನ ಒಟ್ಟು ಅಭಿಪ್ರಾಯ ಇಷ್ಟು: ಈ ಕ್ರಾಂತಿಯಲ್ಲಿ ಇತರ ಶರಣರೂ ಪಾತ್ರ ವಹಿಸಿದ್ದಾರೆ. ಆದರೆ ಬಸವಣ್ಣನವರ ದೃಢವಾದ ಬೆಂಬಲವಿಲ್ಲದೆ ಹೋಗಿದ್ದ ಪಕ್ಷದಲ್ಲಿ, ಕ್ರಾಂತಿಗೆ ಯಶಸ್ಸು ಲಭಿಸುತ್ತಿರಲಿಲ್ಲ. ಆದ್ದರಿಂದ ಬಸವಣ್ಣನವರ ಹಾಗೂ ಅವರ ಮುಂದಾಳತ್ವದಲ್ಲಿ ನಡೆದ ಕ್ರಾಂತಿಯ ಪ್ರಮುಖ ಲಕ್ಷಣ ಗಳನ್ನು ಅರಿಯಲು ಅಂಥ ಸಮಕಾಲೀನರ ಜೀವನಗಳ ಇಣುಕು ನೋಟ ಪಡೆಯುವುದು ಅವಶ್ಯಕ.

ಬಾಲ್ಯದಲ್ಲಿ ತಂದೆ ತಾಯಿಗಳ ಪ್ರೇಮವಾತ್ಸಲ್ಯಗಳೆಲ್ಲವನ್ನೂ ಬಸವಣ್ಣ ನವರು ಗಳಿಸಿದ್ದರು. ಅವರ ಉಪನಯನದ ಕಥಾನಕವೇ ತಕ್ಕಮಟ್ಟಿಗೆ ಆಶ್ಚರ್ಯಕರವಾಗಿದೆ. ತಮ್ಮ ತಂದೆತಾಯಿಗಳ ಬಗ್ಗೆ ಬಸವಣ್ಣನವರಲ್ಲಿ ಅದೊಂದು ಕಹಿ ಭಾವನೆಯನ್ನು ಉಂಟುಮಾಡಿತು. ಅವರ ಹೆತ್ತವರು ಮೃತರಾಗುವವರೆಗೂ ಈ ಕಹಿ ಉಳಿದಂತೆ ಕಾಣುತ್ತದೆ. ತಮ್ಮ ಅನಂತರದ ಕೆಲವು ವಚನಗಳಲ್ಲಿ ಹೆತ್ತವರ ಬಗ್ಗೆ ಬಸವಣ್ಣನವರು ಅನಾದರವನ್ನು ತೋರಿಸಿದ್ದಾರೆ ಹಾಗೂ ತಮ್ಮನ್ನೇ ಚನ್ನಯ್ಯನದಾಸರ ಅನೌರಸ ಶಿಶುವೆಂದು ಕರೆದುಕೊಂಡಿದ್ದಾರೆ. ತಮ್ಮೊಂದು ವಚನದಲ್ಲಿ ಅವರು ಹೀಗೆಂದಿದ್ದಾರೆ: ''ಎನಗಾರೂ ಇಲ್ಲ, ಎನಗಾರೂ ಇಲ್ಲವೆಂಬರು; ಬಾಣನವ ನಾನು, ಮಯೂರನವ ನಾನು; ಕಾಳಿದಾಸನವ ನಾನು,[1] ಕಕ್ಕಯ್ಯ ಹಿರಿಯಯ್ಯ ಚಿಕ್ಕಯ್ಯ, ಚನ್ನಯ್ಯ ಎತ್ತಿ ಮುದ್ದಾಡಿ ಸಲಹಿದರೆನ್ನ ಕೂಡಲ ಸಂಗಯ್ಯಾ'' ಯಾವುದೇ ಕಾಲದಲ್ಲಿಯೂ ಅವರು ತಮ್ಮ ತಂದೆತಾಯಿಗಳನ್ನಾಗಲಿ ಅವರ ಜಾತಿಯನ್ನಾಗಲಿ ಜ್ಞಾಪಿಸಿಕೊಳ್ಳಲು ಬಯಸಲಿಲ್ಲ. ತಮ್ಮ ತಂದೆ

1.ಈ ಮೂವರು ಕವಿಗಳನ್ನು ಶಿವನ ಮಹಾ ಭಕ್ತರೆಂದು ಬಹುಮಟ್ಟಿಗೆ ಎಲ್ಲ ವೀರಶೈವ ಕವಿಗಳೂ ಸ್ತುತಿಸಿದ್ದಾರೆ.

ತಾಯಿಗಳಿಂದ ಹಾಗೂ ಬಂಧು ಬಾಂಧವರಿಂದ ತಾರುಣ್ಯದಲ್ಲಿ ಸಿಗದಂಥ ವಾತ್ಸಲ್ಯ ಬಸವಣ್ಣನವರಿಗೆ ಮಂಗಳವೇಡ ಹಾಗೂ ಕಲ್ಯಾಣಗಳಲ್ಲಿ ಸ್ನೇಹಿತರಿಂದಲೂ ಸಂಗಡಿಗರಿಂದಲೂ ದೊರಕಿತ್ತು. ತಮ್ಮ ಜನರಲ್ಲಿ ಅವರಿಗೆ ಅಚಲವಾದ ವಿಶ್ವಾಸವಿತ್ತು. ಲಿಂಗಧಾರಣೆ ಮಾಡಿದವನ ಋಜುತ್ವವನ್ನು ಪರೀಕ್ಷಿಸಲು ತಾವು ಎಂದೂ ಪ್ರಯತ್ನಿಸುವುದಿಲ್ಲವೆಂದು ಅವರು ತಿಳಿಸಿದ್ದಾರೆ.

ಎಡದಕೈಯಲಿ ಕತ್ತಿ, ಬಲದ ಕೈಯಲಿ ಮಾಂಸ,
ಬಾಯಲ್ಲಿ ಸುರೆಯ ಗಡಿಗೆ -
ಕೊರಳಲಿ ದೇವರಿರಲಿ, ಅವರ ಲಿಂಗನೆಂಬೆ, ಸಂಗನೆಂಬೆ,
ಕೂಡಲಸಂಗಮದೇವಾ, ಅವರ ಮುಖಲಿಂಗಿಗಳೆಂಬೆನು!

ಒಬ್ಬ ವ್ಯಕ್ತಿ ವೀರಶೈವನೇ ಅಥವಾ ಅಲ್ಲವೇ ಎಂದು ತಿಳಿಯುವುದಷ್ಟೇ ತಮ್ಮ ಮುಖ್ಯ ಆಸಕ್ತಿಯೆಂದು ಬಸವಣ್ಣನವರು ಹೇಳಿದ್ದಾರೆ. ವ್ಯಕ್ತಿಯು ಎಷ್ಟರ ಮಟ್ಟಿಗೆ ವೀರಶೈವನೆಂದು ನಿರ್ಧರಿಸುವ ಕಾರ್ಯವನ್ನು ತಾವು ದೇವರಿಗೇ ಬಿಟ್ಟಿರುವುದಾಗಿ ಅವರು ಹೇಳಿದ್ದಾರೆ. ಅವರ ಈ ಪ್ರವೃತ್ತಿಯನ್ನು ಒಪ್ಪುವುದು ನಮಗೆ ಕಷ್ಟವಾಗಬಹುದು. ಒಬ್ಬ ಆದರ್ಶವಾದಿಯಂತೆ ಅವರು ಸಮಾಜವನ್ನು ಟೀಕಿಸಿದ್ದಾರೆ. ಕೆಲವು ಸಲ ತಮ್ಮ ಜನರನ್ನೇ ಅವರ ನ್ಯೂನತೆಗಳಿಗಾಗಿ ಬಸವಣ್ಣನವರು ಟೀಕಿಸಿದ್ದುಂಟು. ಕ್ರಾಂತಿಯಲ್ಲಿ ಆಸಕ್ತಿ ತಾಳಿದ, ಕಾರ್ಯನಿರತ ವ್ಯಕ್ತಿಯಾಗಿ ಅವರಿಗೆ ತಮ್ಮ ಅನುಯಾಯಿಗಳಲ್ಲಿ ದೃಢವಾದ ವಿಶ್ವಾಸವಿತ್ತು. ಅವರ ವ್ಯಕ್ತಿ ಮೌಲ್ಯವನ್ನು ಬಸವಣ್ಣನವರು ಗುರುತಿಸಿದ್ದರು.

ಎಲ್ಲ ಬಗೆಯ ಹಾಗೂ ಎಲ್ಲ ವರ್ಗಗಳ ಜನರೂ, ವಿವಿದ ರೀತಿಯ ಬುದ್ಧಿಶಕ್ತಿ ಹಾಗೂ ಸಾಮರ್ಥ್ಯಗಳನ್ನು ಹೊಂದಿದ ಜನರೂ ಬಸವಣ್ಣನವರಲ್ಲಿಗೆ ಬರುತ್ತಿದ್ದರು. ಇವರಲ್ಲಿ ನಿಷ್ಕಪಟಿಗಳಾದ ಭಕ್ತರೂ, ಅನುಭಾವಿಗಳೂ, ವಿಚಾರಶೀಲರೂ, ನಾಸ್ತಿಕರೂ ಮತ್ತು ಕೆಲವು ಸಲ ಕಳ್ಳರು ಹಾಗೂ ಪೋಲಿಗಳೂ ಕೂಡ ಸೇರಿದ್ದರು.

ಬಸವಣ್ಣನವರ ಮನೆಗೆ ಬರುತ್ತಿದ್ದ ಸಾಮಾನ್ಯ ಜನರ ಬಗ್ಗೆ ಮೊದಲು ತಿಳಿದುಕೊಂಡು ಆಮೇಲೆ ಅವರ ಕ್ರಾಂತಿಯಲ್ಲಿ ಪಾತ್ರವಹಿಸಿದ ಅನುಭಾವಿಗಳು ಹಾಗೂ ಮುಖಂಡರಲ್ಲಿ ಕೆಲವರನ್ನು ಕುರಿತು ವಿಚಾರ ಮಾಡೋಣ.

ಕಳಿಂಗದಲ್ಲಿ (ಈಗಿನ ಒರಿಸ್ಸಾ) ಮಹಾದೇವಿ ಸೆಟ್ಟಿಯೆಂಬ ಭಕ್ತನೊಬ್ಬ ನಿದ್ದ. ಇವನು ವರ್ತಕ. ಒಂದು ದಿನ ಯಾರೋ ಒಬ್ಬರು ಅವನೆದುರು ಒಂದು ಹಾಡನ್ನು ಹಾಡಿದರು. ಅದರರ್ಥ ಹೀಗಿತ್ತು: '' ನಾನು ಬೇಡುವರಿಲ್ಲದೆ ಬಡವನಾದೆ; ಬೇಡಿದ ಶರಣಂಗೆ ನೀಡದಿದ್ದರೆ ತಲೆದಂಡ! '' ಈ ಬಗೆಯ ಪ್ರಜ್ಞಾವಾಕ್ಯವನ್ನು ಕೇಳಿದ ಅವನು ಅಚ್ಚರಿಪಟ್ಟು, ಗಾಡಿ ತುಂಬ ಚಿನ್ನ ಮುತ್ತು ಹಾಗೂ ಮಾಣಿಕ್ಯಗಳನ್ನು ಕೇಳುವುದರ ಮೂಲಕ ಬಸವಣ್ಣ

ನವರನ್ನು ಪರೀಕ್ಷಿಸಲು ನಿರ್ಧರಿಸಿದ. ಅವನು ಕಲ್ಯಾಣಕ್ಕೆ ಬಂದು, ಬಸವಣ್ಣನವರು ಪ್ರಾಮಾಣಿಕರಾದ ಮಹಾಭಕ್ತರೆಂಬುದು ತಿಳಿದು ಸ್ವತಃ ಲಜ್ಜೆಪಟ್ಟ. ಆದರೆ ಬಸವಣ್ಣನವರಲ್ಲಿ ಏನೂ ಕೇಳದೆ ಹಾಗೆಯೇ ಬರಲು ಮನಸ್ಸಾಗಲಿಲ್ಲ. ಈ ತಿಕ್ಕಾಟದಲ್ಲಿ ಸಿಲುಕಿದ ಮಹಾದೇವಿ ಸೆಟ್ಟಿ ಗಾಡಿ ತುಂಬ ಧಾನ್ಯ ಕೊಡುವಂತೆ ಬೇಡಿಕೊಂಡ. ಇದನ್ನು ಕಂಡು ನಕ್ಕ ಬಸವಣ್ಣನವರು ಅವನಿಗೆ ಅಪಾರ ಸಂಪತ್ತನ್ನು ನೀಡಿದರು.

ಬಸವಣ್ಣನವರ ಒಳ್ಳೆಯತನದ ಪ್ರಯೋಜನ ಪಡೆದವರೂ ಇದ್ದರು. ಶಿವಭಕ್ತರ ವೇಷತೊಟ್ಟ ಕೆಲವು ಕಳ್ಳರು ಅವರಲ್ಲಿಗೆ ಬಂದು ಅವರ ಆತಿಥ್ಯವನ್ನು ಪಡೆದರು. ಲಿಂಗಧಾರಣೆಯ ಬದಲು ಅವರು ಚಿಕ್ಕ ಬದನೆಕಾಯಿಗಳನ್ನು ಬಟ್ಟೆಯ ಚೂರಿನಲ್ಲಿ ಕಟ್ಟಿಕೊಂಡು ತಮ್ಮ ದೇಹದಲ್ಲಿ ಧರಿಸಿದ್ದರು. ಪೂಜೆಯ ಸಮಯದಲ್ಲಿ ಲಿಂಗಗಳನ್ನು ಹೊರತೆಗೆಯುವಂತೆ ಅವರನ್ನು ಬಸವಣ್ಣನವರು ಕೇಳಿಕೊಂಡರು. ಆಗ ಕಳ್ಳರು ಚಕಿತರಾದರು. ಹಾಗೂ ಭಯದಿಂದ ನಡುಗಿದರು. ಅವರು ಠಕ್ಕರೆಂದು ತತ್‌ಕ್ಷಣ ಬಸವಣ್ಣನವರಿಗೆ ಅರಿವಾಯಿತು. ಆದರೂ ಅತ್ಯಂತ ಗೌರವದಿಂದಲೇ ಅವರೊಡನೆ ನಡೆದುಕೊಂಡರು, ಠಕ್ಕರು ಪಶ್ಚಾತ್ತಾಪಪಟ್ಟು ಬಸವಣ್ಣನವರ ಮಾಂತ್ರಿಕ ವಶೀಕರಣ ಶಕ್ತಿಗೆ ಒಳಗಾಗಿ ಅವರ ಶಿಷ್ಯರಾದರು.

ಇನ್ನೊಂದು ಸಂದರ್ಭದಲ್ಲಿ ಭಕ್ತರಂತೆ ವೇಷ ತೊಟ್ಟು ಕೆಲವು ಕಳ್ಳರು ಬಸವಣ್ಣನವರ ಗೋಮಾಳಕ್ಕೆ ಹೋಗಿ ಕೆಲವು ಹಸುಗಳನ್ನು ಕದ್ದರು. ಆಗ ದನ ಕಾಯುವ ಹುಡುಗ ಬಸವಣ್ಣನವರಲ್ಲಿಗೆ ಬಂದು ಅವುಗಳನ್ನು ಬಿಡಿಸಿ ಹಿಂದೆ ತರಲು ಜನರನ್ನು ಕಳುಹಿಸುವಂತೆ ಕೇಳಿಕೊಂಡ. ಬಸವಣ್ಣನವರ ಪ್ರತಿಕ್ರಿಯೆ ತುಂಬ ಅನಿರೀಕ್ಷಿತವಾಗಿತ್ತು. ಅವರು 'ಶಿವನ ವೇಷವೂ ಕಳ್ಳತನವೂ ಒಂದೆಡೆ ಇರಲು ಸಾಧ್ಯವಿಲ್ಲ' ಎಂದು ಹೇಳಿದರು. ಹಸುಗಳು ಸೇರಬೇಕಾದ ಸ್ಥಳವನ್ನೇ ಸೇರಿವೆ ಎಂದು ಭಾವಿಸಿದರು. ಭಾವಪರವಶರಾದ ಅವರು ಈ ವಚನವನ್ನು ಹಾಡಿದರು:

ಆಕಳ ಕಳ್ಳರು ಕೊಂಡೊಯ್ದರೆನ್ನದಿರಿಂ ಭೋ ನಿಮ್ಮ ಧರ್ಮ!
ಬೊಬ್ಬಿಡಿದಿರಿಂ ಭೋ, ನಿಮ್ಮ ಧರ್ಮ!
ಅರಡದಿರಿಂ ಭೋ, ನಿಮ್ಮ ಧರ್ಮ!
ಅಲ್ಲಿ ಉಂಬರೆ ಸಂಗ, ಇಲ್ಲಿ ಉಂಬರೆ ಸಂಗ!
ಕೂಡಲಸಂಗಮದೇವ, ಏಕೋ ಭಾವ!

ಎಲ್ಲಕ್ಕಿಂತ ಮಿಗಿಲಾಗಿ ಅವರು ಹಸಿದ ಕರುಗಳ ಬಗ್ಗೆ ಸಂಕಟಪಟ್ಟರು. ಹಸುಗಳನ್ನು ಹಿಂದೆ ಕರೆದುಕೊಂಡು ಬರುವ ಬದಲು, ಕಣ್ಣುಗಳಲ್ಲಿ ಸಂತೋಷಾಶ್ರುಗಳನ್ನು ತುಂಬಿಕೊಂಡ ಅವರು, ಕರುಗಳನ್ನೂ ಅವುಗಳ ತಾಯಿಗಳಲ್ಲಿಗೆ ಕಳುಹಿಸಿದರು. (ಆದರೆ ಆ ಕರುಗಳನ್ನು ಪಡೆಯಲು

ಕಳ್ಳರು ಅಲ್ಲಿದ್ದರೇ ಎಂಬುದನ್ನು ಈ ಕಥೆ ತಿಳಿಸುವುದಿಲ್ಲ)

ಕಲ್ಯಾಣದಲ್ಲಿ ಶಿವಭಕ್ತನೂ ಆಗಿದ್ದ ಪ್ರೇಮಿಯೊಬ್ಬನಿದ್ದ. ಅವನ ಪ್ರೇಯಸಿಗೆ ನೀಲಲೋಚನೆ ಧರಿಸಿದ್ದ ಕರ್ಣಕುಂಡಲಗಳ ಬಗ್ಗೆ ಆಸೆ ಉಂಟಾಯಿತು. ಅವುಗಳನ್ನು ಹೇಗಾದರೂ ಮಾಡಿ ತನಗೆ ತಂದುಕೊಡ ಬೇಕೆಂದು ಅವಳು ಪ್ರಿಯನಲ್ಲಿ ಕೇಳಿಕೊಂಡಳು. ಅವನು ಒಂದು ದಿನ ರಾತ್ರಿ ಬಸವಣ್ಣನವರ ಮನೆಗೆ ನುಗ್ಗಿದ ಹಾಗೂ ನೀಲಲೋಚನೆಯ ಕರ್ಣ ಕುಂಡಲಗಳನ್ನು ಕದ್ದು ಕೊಂಡು ಹೋಗುವ ಪ್ರಯತ್ನ ನಡೆಸಿದ. ನೀಲಲೋಚನೆಗೆ ಎಚ್ಚರವಾಯಿತು. ಅವಳು 'ಕಳ್ಳ!' 'ಕಳ್ಳ'! ಎಂದು ಕಿರುಚಿ ಕೊಂಡಳು. ಬಸವಣ್ಣನವರಿಗೂ ಎಚ್ಚರವಾಯಿತು. ಅವರು ತಮ್ಮೆದುರು ನಡುಗುತ್ತ ನಿಂತಿದ್ದ ಭಕ್ತನನ್ನು ನೋಡಿದರು. ಅವರು ಭಕ್ತನನ್ನಲ್ಲ; ಬದಲಾಗಿ ಭಕ್ತನಿಗೆ ತೊಂದರೆ ಕೊಡುತ್ತಿರುವುದಕ್ಕಾಗಿ ನೀಲಲೋಚನೆಯನ್ನೇ ಬಯ್ದು 'ತೆಗೆದು ಕೊಡಾ ಎಲೆ ಚಂಡಾಲಗಿತ್ತಿ' ಎಂದು ಬಯ್ದರು. ಶಿವಭಕ್ತರಲ್ಲಿ ಬಸವಣ್ಣನವರಿಗಿದ್ದ ಶ್ರದ್ಧೆ ಇಷ್ಟೊಂದು ಗಾಢವಾಗಿತ್ತು. ನೀಲಲೋಚನೆಯೂ ಸಂತೋಷದಿಂದಲೇ ತನ್ನ ಆಭರಣಗಳನ್ನು ತೆಗೆದು ಕೊಟ್ಟಳು. ಅವಳು ಮತ್ತು ಅವಳ ಸೋದರಿ - ಇವರಿಬ್ಬರೂ ತಮ್ಮ ಗಂಡನಿಗಾಗಿ ಸರ್ವಸ್ವವನ್ನೂ ತ್ಯಾಗ ಮಾಡಲು ಸಿದ್ಧರಾಗಿದ್ದರು.

ಬಸವಣ್ಣನವರಲ್ಲಿಗೆ ಬರುತ್ತಿದ್ದ ಜನರು ಯಾವ ರೀತಿಯವರಾಗಿದ್ದರು ಎಂಬ ನೋಟವೊಂದನ್ನು ಈ ಕಥಾನಕಗಳು ನಮಗೆ ನೀಡುತ್ತವೆ. ಅವರಲ್ಲಿ ಅನೇಕರು ಸರಳರೂ ಬಡವರೂ ಕಡಿಮೆ ಬುದ್ಧಿವಂತರೂ ಅಶಿಕ್ಷಿತರೂ ಲೋಭಿ ಗಳೂ ಆಗಿದ್ದರು. ಅವರೆಲ್ಲರ ಉದ್ಧಾರವೇ ಬಸವಣ್ಣನವರ ಕ್ರಾಂತಿಯ ಧ್ಯೇಯವಾಗಿತ್ತು ಎಂಬುದರಲ್ಲಿ ಸಂದೇಹವಿಲ್ಲ. ಆದ್ದರಿಂದ ಅವರನ್ನು ದೂರ ಇರಿಸುವ ಪ್ರಶ್ನೆಯೇ ಇದ್ದಿರಲಿಲ್ಲ. ಅಲ್ಲದೆ ಅನುಭಾವಿಗಳೂ ವಿದ್ವಾಂಸರೂ ಬಸವಣ್ಣನವರಲ್ಲಿಗೆ ಬರುತ್ತಿದ್ದರು. ಅವರು ಬಸವಣ್ಣನವರಿಂದ ಅನೇಕ ವಿಚಾರಗಳನ್ನೂ ಕಲಿತರು ಹಾಗೂ ಅವರಿಗೆ ಅನೇಕ ವಿಚಾರಗಳನ್ನು ಕಲಿಸಿದರು. ಹೀಗೆ ಆಧ್ಯಾತ್ಮಿಕ ಜ್ಞಾನಿಗಳು ಕ್ರಾಂತಿಯಲ್ಲಿ ಸಕ್ರಿಯ ಪಾತ್ರ ವನ್ನು ನಿರ್ವಹಿಸಿ ಅದರ ಯಶಸ್ಸಿಗೆ ತಮ್ಮ ಕೊಡುಗೆ ಸಲ್ಲಿಸಿದರು.

ಇಂಥವರಲ್ಲಿ ಅಲ್ಲಮಪ್ರಭು ಅಥವಾ ಪ್ರಭುದೇವ ಅಗ್ರಗಣ್ಯನಾಗಿದ್ದ. ಇವನು ಕರ್ನಾಟಕದಲ್ಲಿ ಜನ್ಮ ತಾಳಿದ ಮಹಾ ಅನುಭಾವಿಗಳಲ್ಲಿ ಒಬ್ಬ. ಶಿವಮೊಗ್ಗ ಜಿಲ್ಲೆಯ ಬಳ್ಳಿಗಾವೆಯಲ್ಲಿ ಜನಿಸಿದ ಇವನು ಕಾಮಲತೆಯೆಂಬ ತರುಣಿಯನ್ನು ಪ್ರೇಮಿಸಿ ಅವಳೊಂದಿಗೆ ಕೆಲವು ವರ್ಷಗಳನ್ನು ಸಂತೋಷ ವಾಗಿ ಕಳೆದ. ಇನ್ನೂ ಪ್ರೀತಿ ಹಾಗೂ ಸಂತೋಷಗಳ ಸ್ವಪ್ನಲೋಕದಲ್ಲಿ ಅವರಿರು ವಾಗಲೇ ಕಾಮಲತೆ ತೀವ್ರ ಜ್ವರದಿಂದ ಸತ್ತಳು. ಅವಳ ಸಾವಿನಿಂದ ಅಲ್ಲಮ ಪ್ರಭುವಿಗೆ ಅತ್ಯಂತ ದುಃಖವಾಯಿತು. ಈ ಘಟನೆ ಅವನ ಜೀವನದ

ಒಂದು ತಿರುವು ಬಿಂದುವಾಗಿ ಪರಿಣಮಿಸಿತು. ಕಾಮಲತೆಯೊಂದಿಗಿದ್ದ ಪ್ರೇಮವನ್ನು ದೇವರ ಮೇಲಿನ ಪ್ರೀತಿಯಾಗಿ ಉನ್ನತೀಕರಿಸಲು ಅವನು ಹೋರಾಟ ನಡೆಸಿದ. ಮಾನಸಿಕ ತಿಕ್ಕಾಟ, ಹೋರಾಟ ಹಾಗೂ ಉಗ್ರ ಸಾಧನೆಗಳ ಅನೇಕ ವರ್ಷಗಳು ಕಳೆದುಹೋದ ಅನಂತರ ಅವನು ದೇವರನ್ನು ಅರಿತು ವಿವೇಕಿಯೂ ಜ್ಞಾನಿಯೂ ಆದ.

ಜ್ಞಾನಿಯಾದ ಅಲ್ಲಮ ಸ್ಥಳದಿಂದ ಸ್ಥಳಕ್ಕೆ ಸಂಚರಿಸಿದ; ದೈವ ಭಕ್ತರನ್ನು ಭೇಟಿಯಾಗಿ ಅವರೊಂದಿಗೆ ತನ್ನ ಅನುಭವಗಳನ್ನು ಹಂಚಿಕೊಂಡ, ಅವರಿಗೆ ದೇವರನ್ನು ಸೇರುವ ಮಾರ್ಗವನ್ನು ತೋರಿಸಿದ. ತನ್ನ ಪ್ರೀತಿಯ ಸೋದರನನ್ನು ಕಳೆದುಕೊಂಡು ಅಳುತ್ತಿದ್ದ ಮುಕ್ತಾಯಕ್ಕನನ್ನು ಸಂತೈಸಿ ಸಮಧಾನ ಪಡಿಸಿದ ಹಾಗೂ ಅವಳನ್ನು ಅನುಭಾವಿಯನ್ನಾಗಿ ಪರಿವರ್ತಿಸಿದ. ಗೊಗ್ಗಯ್ಯ ಮತ್ತು ಸಿದ್ಧರಾಮರಂಥವರನ್ನು ಭೇಟಿಯಾಗಿ ಅವರಿಗೆ ಲಿಂಗಾರಾಧನೆಯ ನಿಜವಾದ ಮಹತ್ವವನ್ನು ಬೋಧಿಸಿದ. ಸಿದ್ಧರಾಮ ವೀರಶೈವನಾಗಿ ಮತಾಂತರ ಹೊಂದಲು ಅಲ್ಲಮನೇ ಮುಖ್ಯ ಕಾರಣನಾಗಿ ದ್ದಾನೆ. ಅವನು ಮತಾಂತರಗೊಂಡ ಈ ಘಟನೆ ವೀರಶೈವ ಧರ್ಮ ವೇಗ ವಾಗಿ ಅಭಿವೃದ್ಧಿ ಹೊಂದಲು ಕಾರಣವಾಯಿತು. (ಏಕೆಂದರೆ ನಾವು ಮುಂದೆ ನೋಡುವಂತೆ ಸಿದ್ಧರಾಮನು ಆ ಕಾಲದಲ್ಲಿ ತುಂಬ ಜನಪ್ರಿಯನಾದ ವ್ಯಕ್ತಿ ಯಾಗಿದ್ದ ಹಾಗೂ ಪ್ರಭಾವಿಯಾದ ಸಾಮಾಜಿಕ ಕಾರ್ಯಕರ್ತನಾಗಿದ್ದ. ಅವನಿಗೆ ಅನೇಕ ಮಂದಿ ಅನುಯಾಯಿಗಳೂ ಇದ್ದರು) ಅಲ್ಲಮಪ್ರಭು ಸಿದ್ಧರಾಮನನ್ನು ಕಲ್ಯಾಣಕ್ಕೆ ಕರೆದುಕೊಂಡು ಬಂದ; ಕ್ರಾಂತಿಯ ಮುಖಂಡ ರೆಲ್ಲರನ್ನೂ ಅವನಿಗೆ ಭೇಟಿ ಮಾಡಿಸಿದ -ಬಸವಣ್ಣನವರೂ ಸೇರಿದಂತೆ ಈ ಮುಖಂಡರು ಅಲ್ಲಮಪ್ರಭುವನ್ನು ತಮ್ಮ ಆಧ್ಯಾತ್ಮಿಕ ಗುರುವಾಗಿ ಭಾವಿಸಿ ತಮ್ಮ ಸಾಧನೆಯಲ್ಲಿ ಅವನ ಮಾರ್ಗದರ್ಶನವನ್ನು ಪಡೆದರು. ಬಸವಣ್ಣನವರ ಮನೆಯಲ್ಲಿ ನಡೆಯುತ್ತಿದ್ದ ವಿಚಾರಗೋಷ್ಠಿಗಳಲ್ಲಿ ನಿಸ್ಸಂದೇಹವಾಗಿಯೂ ಅಲ್ಲಮನೇ ಪ್ರಧಾನ ಪಾತ್ರ ವಹಿಸುತ್ತಿದ್ದ. ಗೋಷ್ಠಿಯಲ್ಲಿ ಭಾಗವಹಿಸು ವವರು ಅಲ್ಲಮನ ಅಪಾರ ವಿದ್ವತ್ತು -ಜ್ಞಾನಗಳ ಪ್ರಯೋಜನ ಪಡೆದರು. "ಶೂನ್ಯ ಸಿಂಹಾಸನ"[1] ವನ್ನೇರಲು ಅಲ್ಲಮನೇ ಅವಿರೋಧವಾಗಿ ಆಯ್ಕೆ ಗೊಂಡನೆಂದು ಹೇಳಲಾಗಿದೆ. ಅವನು ಆಧ್ಯಾತ್ಮಿಕ ಅನುಭವನ್ನು ಪಡೆದ ಅನುಭಾವಿಯಾಗಿ ಖ್ಯಾತಿ ಹೊಂದಿದ್ದನೆಂಬುದಕ್ಕೆ ಈ ನಿದರ್ಶನವೇ ಸಾಕು.

---

1. 'ಶೂನ್ಯ ಸಿಂಹಾಸನ'ದ ಪರಿಕಲ್ಪನೆ ರಹಸ್ಯಾರ್ಥದಿಂದ ಕೂಡಿದೆಯೆಂಬುದಕ್ಕೆ ಆಧಾರವಿದೆ. ಸಾಧಕನೊಬ್ಬ ಏರಬಹುದಾದ ಆಧ್ಯಾತ್ಮಿಕ ಔನ್ನತ್ಯಕ್ಕೆ ಈ ಪದ ಸಂಕೇತವಾಗಿದೆ. ದೇವರು ಶೂನ್ಯನೂ ಹೌದು, ಪರಿಪೂರ್ಣನೂ ಹೌದೆಂದು ವೀರಶೈವ ಧರ್ಮ ನಂಬುತ್ತದೆ.

ಅಲ್ಲಮನ ವಚನಗಳು ಸುಂದರವಾಗಿವೆ; ಆದರೆ ಸರಳವಾಗಿಲ್ಲ. ಅವನ ಕೆಲವು ವಚನಗಳಿಗೆ 'ಬೆಡಗಿನ ವಚನ'ಗಳೆಂಬ ಹೆಸರಿದೆ. 'ಬೆಡಗು' ಎಂಬುದರ ಪದಶಃ ಅರ್ಥ 'ಚೆಲುವು' ಅಥವಾ 'ಹೊಸತನ'. ಈ ಶಬ್ದಕ್ಕೆ ಅಸಾಮಾನ್ಯತೆ ಎಂಬ ಅರ್ಥವೂ ಇದೆ. ಈ ಬೆಡಗಿನ ವಚನಗಳು ಸ್ವಭಾವತಃ ವಿರೋಧೋಕ್ತಿಯಿಂದ ಕೂಡಿದ್ದು, ಸಾಮಾನ್ಯನಿಗೆ ಒಂದು ಅರ್ಥವನ್ನು ಕೊಟ್ಟರೆ, ವೀರಶೈವ ದೀಕ್ಷೆ ಪಡೆದವನಿಗೆ ಇನ್ನೊಂದರ್ಥ ನೀಡುತ್ತವೆ. ಈ ವಚನಗಳ ಭಾಷೆಯನ್ನು ತಾಂತ್ರಿಕ ಗ್ರಂಥಗಳ 'ಸಂದಾಭಾಷಾ'ಕ್ಕೆ ಹೋಲಿಸಬಹುದು.

ಅಕ್ಕಮಹಾದೇವಿ ಪ್ರಾಯಃ ಕರ್ನಾಟಕದ ಮಹಾಶರಣೆಯರಲ್ಲಿ ಒಬ್ಬಳು. ಇವಳನ್ನು ರಾಜಾಸ್ಥಾನದ ಮೀರಾಬಾಯಿ ಹಾಗೂ ತಮಿಳುನಾಡಿನ ಆಂಡಾಳ್‌ಗೆ ಹೋಲಿಸಬಹುದು. ಬಳ್ಳಿಗಾವೆಗೆ ಸಮೀಪದಲ್ಲಿರುವ ಚಿಕ್ಕ ಪಟ್ಟಣ ವೊಂದರಲ್ಲಿ ಇವಳು ಜನ್ಮ ತಾಳಿದಳು. ಬಾಲ್ಯದಲ್ಲಿಯೇ ದೈವ ಪ್ರೇಮವನ್ನು ಬೆಳೆಸಿಕೊಂಡ ಇವಳು, ಬೆಳೆಯುತ್ತಿದ್ದಂತೆ ತನಗೆ ಶಿವನೊಡನೆ ಮದುವೆ ಯಾಗಿರುವುದಾಗಿ ಭಾವಿಸತೊಡಗಿದಳು. ತಾನು ಶಿವನ ಪ್ರೇಯಸಿಯೆಂದೂ ಅವಳಿಗೆ ಅನಿಸತೊಡಗಿತು. ಆ ಪಟ್ಟಣವನ್ನು ಆಳುತ್ತಿದ್ದ ಸಾಮಂತ ರಾಜನಾದ ಕೌಶಿಕ, ಅಕ್ಕಮಹಾದೇವಿಯನ್ನು ಮದುವೆಯಾಗಲು ಅಪೇಕ್ಷಿಸಿದ. ಮೊದಲು ಕೌಶಿಕನನ್ನು ವಿವಾಹವಾಗಲು ಅಕ್ಕಮಹಾದೇವಿ ಸ್ಪಷ್ಟವಾಗಿ ನಿರಾಕರಿಸಿದಳು. ಆದರೆ ಅನಂತರ ರಾಜನ ಬೆದರಿಕೆಗೊಳಗಾಗಿ ಮದುವೆ ಯಾಗಲೇ ಬೇಕಾಗಿ ಬಂತು. ತರುವಾಯ ಸ್ವಲ್ಪ ಕಾಲ ಅವಳು ಕೌಶಿಕನ ಅರಮನೆಯಲ್ಲಿ ಅವನ ಮಡದಿಯಾಗಿ ಜೀವನ ಸಾಗಿಸಿದಳು. ಆದರೆ ಅವಳು ಮನಸ್ಸಿನಲ್ಲಿ ಶಿವನನ್ನೇ ಮದುವೆಯಾಗಿದ್ದಳು. ಇಂಥ ಇಬ್ಬಂದಿ ಬದುಕು ನಡೆಸುವುದು ಕಷ್ಟವೆಂದು ಅನಿಸಿದಾಗ, ಅವಳು ತಾನೇ ವಿಚ್ಛೇದನ ಪಡೆದು ಅರಮನೆಯನ್ನು ತೊರೆದು ಹೊರಟಳು. ಅಂದಿನಿಂದ, ದೈವೀ ಭಾವನೆಯ ಹಾಗೂ ದೇವರನ್ನು ಕುರಿತ ಹಾಡುಗಳನ್ನು ಹಾಡುತ್ತ ಸ್ಥಳದಿಂದ ಸ್ಥಳಕ್ಕೆ ಸಂಚರಿಸತೊಡಗಿದಳು.

ಪತಿಯಿಂದ ವಿಚ್ಛೇದನ ಪಡೆದದ್ದು ಅಕ್ಕಮಹಾದೇವಿಯ ಸಾಹಸದ ಕಾರ್ಯವಾಗಿತ್ತು. ಅವಳ ಆ ವರ್ತನೆಯನ್ನು ಪ್ರಾಯಃ ಅನೇಕರು ಒಪ್ಪಿರ ಲಾರರು. ಆದರೆ ಅಲ್ಲಮ ಮತ್ತಿತರ ಶರಣರಿಗೆ ಅವಳ ಬಗ್ಗೆ ಅತ್ಯಂತ ಗೌರವವಿತ್ತು. ಅವಳು ಶಿವನ ನಿಜವಾದ ಭಕ್ತೆ ಎಂಬುದನ್ನು ವಿಶ್ವಕ್ಕೆ ತೋರಿಸಲು ಅವರು ಬಯಸಿದರು. ಅಕ್ಕಮಹಾದೇವಿ ಕಲ್ಯಾಣಕ್ಕೆ ಬಂದು ಬಸವಣ್ಣನವರ ಮನೆಯಲ್ಲಿದ್ದ ಶರಣರನ್ನು ಭೇಟಿಯಾದಳು. ಅಲ್ಲಮ ಕೆಲವು ಶೋಧನ ಪ್ರಶ್ನೆಗಳನ್ನು ಕೇಳಿದಾಗ, ಅಕ್ಕಮಹಾದೇವಿ ತೃಪ್ತಿಕರ ಉತ್ತರ ನೀಡಿದಳು. ಅವಳದು ಪರಿಶುದ್ಧವಾದ ದೈವ ಪ್ರೇಮವೆಂದೂ ಆ ಪ್ರೇಮವೇ

ಮದುವೆಯಂತಹ ಒಂದು ಸುಸ್ಥಾಪಿತ ಸಾಮಾಜಿಕ ವ್ಯವಸ್ಥೆಯನ್ನು ಕಡೆಗಣಿಸಲು ಅವಳಿಗೆ ಧೈರ್ಯ ನೀಡಿತೆಂದೂ ಅವಳ ಉತ್ತರಗಳಿಂದ ಜನರಿಗೆ ಮನವರಿಕೆಯಾಯಿತು. ಶಿವನೊಡನೆ ಅವಳ ಮದುವೆಯನ್ನು ತಮ್ಮ ಮನೆಯಲ್ಲಿಯೇ ಬಸವಣ್ಣನವರು ನೆರವೇರಿಸಿದರು. ಹೀಗೆ ಶಿವನೊಡನೆ ಅಕ್ಕ ಮಹಾದೇವಿಗೆ ಇದ್ದ ಸಂಬಂಧ ನ್ಯಾಯವಿಹಿತವಾದಂತೆ ಕಂಡು ಬರುತ್ತದೆ. ಅನಂತರ ಅವಳು ಕಲ್ಯಾಣದಿಂದ ಆಂಧ್ರಪ್ರದೇಶದ ಶ್ರೀಶೈಲಕ್ಕೆ ತೆರಳಿ ಅಲ್ಲಿ ಶಿವೈಕ್ಯಳಾದಳು.

ಸ್ವರೂಪದಲ್ಲಿ ಭಾವಗೀತೆಗಳಂತಿರುವ ಅತ್ಯಂತ ಸುಂದರವಾದ ಕೆಲವು ವಚನಗಳನ್ನು ಅಕ್ಕಮಹಾದೇವಿ ರಚಿಸಿದ್ದಾಳೆ. ಆಧ್ಯಾತ್ಮಿಕ ಯಾತ್ರೆಯಲ್ಲಿ ಅವಳು ಎದುರಿಸಿದ ಎಲ್ಲ ಸಂಕ್ಷೋಭೆಗಳನ್ನೂ ಸಂಘರ್ಷಗಳನ್ನೂ ಇವು ತಿಳಿಸುತ್ತವೆ. ಸಾಹಿತ್ಯಿಕ ಗುಣಕ್ಕೆ ಸಂಬಂಧಿಸಿರುವಷ್ಟರಮಟ್ಟಿಗೆ ಹೇಳುವುದಾದರೆ, ಬಸವಣ್ಣನವರ ವಚನಗಳನ್ನು ಬಿಟ್ಟರೆ, ಅಕ್ಕಮಹಾದೇವಿಯ ವಚನಗಳೇ ಪ್ರಥಮ ಸ್ಥಾನಗಳಿಸುತ್ತವೆ.

ಸಿದ್ಧರಾಮ ಹನ್ನೆರಡನೆಯ ಶತಮಾನದ ಖ್ಯಾತ ವ್ಯಕ್ತಿಗಳಲ್ಲಿ ಒಬ್ಬ. ಅವನು ಶಿವನ ಭಕ್ತನಾಗಿದ್ದ ಹಾಗೂ ಪ್ರಾಯಃ ಲಕುಲೀಶಪಾಶುಪತ ಪಂಥಕ್ಕೆ ಸೇರಿದ್ದ. ಧರ್ಮ ಪ್ರಸಾರ ಮಾಡಬೇಕೆಂಬ ಉತ್ಸಾಹವಿದ್ದ ಇವನು ಸಾಮಾಜಿಕ ಕಾರ್ಯ ಕರ್ತನಾಗಿದ್ದ. ಮಠವೊಂದರ ಅಧ್ಯಕ್ಷನಾಗಿದ್ದ ಸಿದ್ಧರಾಮನಿಗೆ ಅನೇಕ ಶಿಷ್ಯರಿದ್ದರು. ಸಿದ್ಧರಾಮನ ಊರಾದ ಸೊನ್ನಲಿಗೆ (ಮಹಾರಾಷ್ಟ್ರದ ಶೋಲಾಪುರ) ಒಂದು ಚಿಕ್ಕ ಗ್ರಾಮವಾಗಿತ್ತು. ಆದರೆ ಅವನು ಅದನ್ನು ದೊಡ್ಡ ಪಟ್ಟಣವನ್ನಾಗಿ ಮಾಡಿದ. ಅಲ್ಲಿ ಅವನು ದೊಡ್ಡ ದೇವಾಲಯವೊಂದನ್ನು ಕಟ್ಟಿಸಿ ಶಿವನ ವಿಗ್ರಹವನ್ನು ಪ್ರತಿಷ್ಠಾಪಿಸಿದ. ಇತರ ಸ್ಥಳಗಳಲ್ಲಿಯೂ ಸಿದ್ಧರಾಮ ಅನೇಕ ದೇವಾಲಯಗಳನ್ನು ನಿರ್ಮಿಸಿದ. ಶೋಲಾಪುರದಲ್ಲಿ ಈಗಲೂ ಯುಕ್ತ ಸ್ಥಿತಿಯಲ್ಲಿರುವ ದೊಡ್ಡ ಕೆರೆಯೊಂದನ್ನು 'ದನಗಳಿಗೆ, ಜನಗಳಿಗೆ, ಕ್ರಿಮಿಕೀಟಾದಿಗಳಿಗೆ ನೀರನ್ನು ಒದಗಿಸಲು' ಕಟ್ಟಿಸಿದವನೂ ಸಿದ್ಧರಾಮನೇ ಆಗಿದ್ದಾನೆ. 'ಎಲ್ಲ ಕಣ್ಣುಗಳಿಂದ ಎಲ್ಲ ಹನಿ ಕಣ್ಣೀರನ್ನೂ' ತೊಡೆಯುವುದು ಅವನ ಬಯಕೆಯಾಗಿತ್ತು. ಅನೇಕ ಬಡವರನ್ನು ಋಣಮುಕ್ತರನ್ನಾಗಿ ಮಾಡಿದ ದಯಾಳು ಸಿದ್ಧರಾಮ. ತಾನು ಕಟ್ಟಿಸಿದ ದೇವಾಲಯಗಳಲ್ಲಿ ಅವನು ಸಮೂಹ ವಿವಾಹಗಳ ವ್ಯವಸ್ಥೆ ಮಾಡಿಸಿದ. ಹಾಗೂ ಕನಿಷ್ಠ ವೆಚ್ಚದಲ್ಲಿ ಮದುವೆಗಳನ್ನು ನೆರವೇರಿಸಲು ಬಡವರಿಗೆ ಸಹಾಯ ಮಾಡಿದ. ಸಿದ್ಧರಾಮನ ಸಮಕಾಲೀನರು ಅವನನ್ನು ದೇವರೆಂದೇ ಭಾವಿಸಿದ್ದರು. ಸಿದ್ಧರಾಮನಿಗೆ ತಿಳಿಯ ಹೇಳಿ ಅವನನ್ನು ವೀರಶೈವಧರ್ಮಕ್ಕೆ ಮತಾಂತರಗೊಳಿಸುವುದರಲ್ಲಿ ಅಲ್ಲಮಪ್ರಭು ಯಶಸ್ವಿಯಾದ. ಅಲ್ಲಮನ ಮಾರ್ಗದರ್ಶನದಲ್ಲಿ ಸಿದ್ಧರಾಮ ಆಧ್ಯಾತ್ಮಿಕ ಆಚರಣೆ

ಗಳನ್ನು ಪ್ರಾರಂಭಿಸಿದ ಹಾಗೂ ತಾನು ಆ ಮೊದಲು ಕಟ್ಟಿಸಿದ ಕೆರೆಯ ನಡುವೆ ನಿರ್ಮಿಸಲಾದ ಸುತ್ತುಗಟ್ಟುಳ್ಳ ಚಿಕ್ಕ ಪ್ರದೇಶವೊಂದರಲ್ಲಿ ಶಿವೈಕ್ಯನಾದ.

ಸಕಲೇಶಮಾದರಸ ಬಸವಣ್ಣನವರ ಹಿರಿಯ ಸಮಕಾಲೀನರಲ್ಲಿ ಒಬ್ಬ. ಶ್ರೀಶೈಲದಿಂದ ಬಂದ ಇವನು ಕಲ್ಯಾಣದಲ್ಲಿ ಕೆಲ ಕಾಲ ಕಳೆದ. ಇವನೊಬ್ಬ ದೊಡ್ಡ ಸಂಗೀತ ವಿದ್ವಾಂಸ. 'ರಾವಣಹಸ್ತ', 'ಕಿನ್ನರವೀಣೆ', 'ಕಚ್ಛಪವೀಣೆ', 'ಸಾರಂಗವೀಣೆ'ಗಳಂತಹ ವಾದ್ಯಗಳನ್ನು ಇವನು ಶಾಸ್ತ್ರೀಯವಾಗಿ ನುಡಿಸುತ್ತಿದ್ದ. ಇವನು ವಚನಕಾರನೂ ಹೌದು. ಸಕಲೇಶಮಾದರಸನನ್ನು ತುಂಬ ಮೆಚ್ಚಿದ ಬಸವಣ್ಣನವರು ಅವನಿಂದ ಅನೇಕ ವಿಚಾರಗಳನ್ನೂ ನುಡಿಗಟ್ಟುಗಳನ್ನೂ ಎರವಲು ಪಡೆದಿದ್ದಾರೆ.

ಮಡಿವಾಳ ಮಾಚಯ್ಯ ಒಬ್ಬ ಅಗಸ. ಇವನು ನಿಷ್ಠಾವಂತ ವೀರಶೈವ. ಕಲ್ಯಾಣದಲ್ಲಿ ನೆಲಸಿದ ಶಿವಭಕ್ತರ ವಸ್ತ್ರಗಳನ್ನು ಒಗೆಯುವುದೇ ಇವನ ಕಾಯಕವಾಗಿತ್ತು. ಇವನು ಬೆಂಕಿಯಂಥ ವ್ಯಕ್ತಿ. ರಾಜನಿಗೂ ಹೆದರುತ್ತಿರಲಿಲ್ಲ. ಒಂದು ಕಥೆಯ ಪ್ರಕಾರ, ರಾಜಮನೆತನದವರ ಬಟ್ಟೆಗಳನ್ನೊಗೆಯಲು ಇವನು ನಿರಾಕರಿಸಿದ. ರಾಜ ಇವನನ್ನು ಶಿಕ್ಷಿಸಬಯಸಿದ. ಆದರೆ ಸಾಧ್ಯ ಆಗಲಿಲ್ಲ. ಅಸ್ಪೃಶ್ಯರು ನಗರದೊಳಕ್ಕೆ ಬರುತ್ತೇವೆ ಎಂದು ಘೋಷಿಸುವಂತೆ ಕಂಡು ಬಂತು. ಇದಕ್ಕೆ ಪ್ರತೀಕಾರವೋ ಎಂಬಂತೆ, ಮಾಚಯ್ಯ ಘಂಟೆಯೊಂದನ್ನು ಹಿಡಿದು, ಅದನ್ನು ಬಡಿದು ಸದ್ದು ಮಾಡುತ್ತ ಬೀದಿ ಬೀದಿಗಳನ್ನು ಸುತ್ತಿದ; ತನ್ನನ್ನು ಸ್ಪರ್ಶಿಸಿದ 'ಭವಿ'ಯನ್ನು ಶಿಕ್ಷಿಸುವುದಾಗಿ ಸಾರಿದ. ಒಂದು ಸಂದರ್ಭದಲ್ಲಿ ಬಸವಣ್ಣನವರು, ತಾವೇ ದಾನಿ ಎಂದೂ ಉಳಿದವರೆಲ್ಲ ದಾನ ಪಡೆಯುವವರೆಂದೂ ಆತ್ಮವಿಶ್ವಾಸ ತಾಳಿದ್ದರು. ಮಾಚಯ್ಯ ತನ್ನ ಟೀಕೆಗಳಿಂದ ಅವರ ಅಹಂಕಾರವನ್ನೂ ಅಳಿಸಿದ. ಇಂಥದೇ ಸ್ವಭಾವ - ಮನೋಭಾವಗಳನ್ನು ಹೊಂದಿದ್ದ ಇನ್ನೊಬ್ಬ ಶರಣನೇ ಚೌಡಯ್ಯ. ಇವನು ಅಂಬಿಗ. ಇವನು ಬಹಳ ಬೇಗ ಕೆರಳುತ್ತಿದ್ದನೆಂದು ಇವನ ವಚನಗಳಿಂದಲೇ ಸ್ಪಷ್ಟವಾಗುತ್ತದೆ. ತನ್ನ ವಚನಗಳಲ್ಲಿ ಇವನು ಸುತ್ತಲಿನ ಸಮಾಜವನ್ನು ಉಗ್ರವಾಗಿ ಟೀಕಿಸಿದ್ದಾನೆ. ತನ್ನ ಸ್ವಂತ ಸಮುದಾಯಕ್ಕೆ ಸೇರಿದ ಜನರನ್ನೇ ಅವರ ಅನೇಕ ಲೋಪ - ದೋಷಗಳಿಗಾಗಿ ಟೀಕಿಸಲು ಚೌಡಯ್ಯ ಹಿಂಜರಿಯಲಿಲ್ಲ. ಮಡಿವಾಳ ಮಾಚಯ್ಯ ಹಾಗೂ ಅಂಬಿಗರ ಚೌಡಯ್ಯ - ಇಬ್ಬರೂ ಬಸವಣ್ಣನವರ ಮನೆಯಲ್ಲಿ ನಡೆಯುತ್ತಿದ್ದ ಚರ್ಚೆಗಳಲ್ಲಿ ಸಕ್ರಿಯ ಪಾತ್ರ ವಹಿಸುತ್ತಿದ್ದರು.

ಮೋಳಿಗೆಯ ಮಾರಯ್ಯ ಬಸವಣ್ಣನವರ ಅತ್ಯಂತ ನಿಕಟವರ್ತಿಯಾಗಿದ್ದ. ಇವನು ಮೊದಲು ಕಾಶ್ಮೀರದ ರಾಜನಾಗಿದ್ದನೆಂದೂ, ಬಸವಣ್ಣನವರು ಮತ್ತು ಅವರ ಭಕ್ತಿಯ ವಿಷಯವನ್ನು ಕೇಳಿ ತಿಳಿದು, ಕಲ್ಯಾಣಕ್ಕೆ ಬಂದು ನಗರದ

ಹೊರವಲಯದಲ್ಲಿ ಬಿಡಾರ ಹೂಡಿದನೆಂದೂ ಕಥೆಯಿಂದ ತಿಳಿದುಬರುತ್ತದೆ. ಇವನು ಸೌದೆ ಮಾರುವ ಕಾಯಕವನ್ನು ಕೈಗೊಂಡಿದ್ದ. ಇವನೊಬ್ಬ ರಾಜನಾಗಿದ್ದು ಭೋಗ -ಸೌಲಭ್ಯಗಳ ಜೀವನ ಸಾಗಿಸಿದ್ದನೆಂದು ಇವನ ವಚನಗಳು ಸ್ಪಷ್ಟಪಡಿಸುತ್ತವೆ. ತನ್ನ ಮಡದಿಯಾಗಿದ್ದ ಮಹಾದೇವಿಯೊಂದಿಗೆ (ಕಲ್ಯಾಣದ ಜನರು ಇವಳನ್ನು ರಾಣಿ ಮಹಾದೇವಿಯೆಂದೂ ಕರೆಯುತ್ತಿದ್ದರು) ನೆಲಸಿದ ಇವನು ಸ್ವತಃ ಇಚ್ಛಿಪಟ್ಟು ದರಿದ್ರ ಜೀವನವನ್ನು ಆರಿಸಿಕೊಂಡ. ಇವನು ಪ್ರತಿ ದಿನ ಬೆಳಗ್ಗೆ ಕಾಡಿಗೆ ಹೋಗಿ ಸೌದೆ ಸಂಗ್ರಹಿಸಿ ತಂದು ಅದನ್ನು ಮಾರಾಟ ಮಾಡುತ್ತಿದ್ದ. ಮೋಳಿಗೆಯ ಮಾರಯ್ಯ ದಂಪತಿಗಳು ಎಂದೂ ಕೂಡ ತಮ್ಮ ದಾರಿದ್ರ್ಯದ ಬಗ್ಗೆ ಗೊಣಗುತ್ತಿರಲಿಲ್ಲ. ಅವರು ತೃಪ್ತರಾಗಿದ್ದರು. ಶಿವಭಕ್ತರನ್ನು ಆಹ್ವಾನಿಸಿ ಅವರಿಗೆ ಅಂಬಲಿಯನ್ನೂ ಮಜ್ಜಿಗೆಯನ್ನೂ ನೀಡುತ್ತಿದ್ದರು. ಭಕ್ತರು ಅವನ ಮನೆಯ ಅಂಬಲಿಯನ್ನು, ಬಸವಣ್ಣನವರ ಮನೆಯ ಅಡಿಗೆಗಿಂತಲೂ ಹೆಚ್ಚು ಇಷ್ಟಪಡುತ್ತಿದ್ದರು. ಮಾರಯ್ಯನಿಗೆ ಆರ್ಥಿಕ ನೆರವು ನೀಡಬಯಸಿದ ಬಸವಣ್ಣನವರು ಒಮ್ಮೆ ಅವನ ಮನೆಗೆ ಹೋದರು. ಆಗ ಮಾರಯ್ಯ ಮನೆಯಲ್ಲಿ ಇರಲಿಲ್ಲ. ಬಸವಣ್ಣನವರು ಮಹಾದೇವಿಯ ಆದರಾತಿಥ್ಯಗಳನ್ನು ಸ್ವೀಕರಿಸಿದರು. ಅಲ್ಲಿಂದ ಹಿಂದಿರುಗುವಾಗ ಅವರು ತುಂಬ ಹಣವಿದ್ದ ತಮ್ಮ ಚೀಲವನ್ನು ಬಿಟ್ಟುಹೋದರು. ಮನೆಗೆ ಬಂದ ಮಾರಯ್ಯ ಹಣದ ಚೀಲವನ್ನು ಕಂಡು ಅಚ್ಚರಿಪಟ್ಟ ಹಾಗೂ ತತ್‌ಕ್ಷಣ ಅವನಿಗೆ ಬಸವಣ್ಣನವರೇ ತನ್ನ ಮೇಲಿನ ಕರುಣೆಯಿಂದ ಹಣದ ಚೀಲ ಬಿಟ್ಟು ಹೋಗಿದ್ದಾರೆಂಬ ಅನುಮಾನವುಂಟಾಯಿತು. ಆದರೆ ಬಡವರಾದ ಆ ದಂಪತಿಗಳು ಹಣವನ್ನು ತೆಗೆದುಕೊಳ್ಳಲು ಒಪ್ಪಲಿಲ್ಲ. ಏಕೆಂದರೆ ಆ ಹಣ ಅವರ ಕಾಯಕದ ಫಲವಾಗಿರಲಿಲ್ಲ. "ನಮ್ಮ ಲಿಂಗ ಕೊಟ್ಟ ಕಾಯಕವೇ ನಮಗೆ ಸಾಕು; ಅನ್ಯರ ಹಂಗು ಬೇಡ" - ಹೀಗೆಂದ ಮಾರಯ್ಯ ಆ ಹಣವನ್ನು ತೆಗೆದುಕೊಳ್ಳಲೇ ಇಲ್ಲ. ರಾಣಿ ಮಹಾದೇವಿ ಕೂಡ ಪತಿಯಂತೆ ವಚನಗಳನ್ನು ರಚಿಸಿದ್ದಾಳೆ. ಅವಳಿಗೆ ತಾನು ಮಹಾರಾಣಿಯಾಗಿದ್ದ ದಿನಗಳ ನೆನಪೂ ಇತ್ತು. ಈ ದಂಪತಿಗಳದು ಆದರ್ಶ ಕುಟುಂಬವೆಂದು ಪರಿಗಣಿಸಲಾಗಿತ್ತು.

ಈ ರಾಜದಂಪತಿಗಳನ್ನಾಗಲಿ, ಇವರ ರಾಜಧಾನಿಯಾಗಿದ್ದ ಮಾಂಡವ್ಯಪುರವನ್ನಾಗಲಿ ಕಾಶ್ಮೀರದಲ್ಲಿ ಗುರುತಿಸುವುದು ದುರದೃಷ್ಟವಶಾತ್ ನಮಗೆ ಸಾಧ್ಯವಾಗಿಲ್ಲ. ಮಾರಯ್ಯ ಪ್ರಾಯಃ ಹಿಮಾಲಯ ಶ್ರೇಣಿಯ ದಕ್ಷಿಣದಲ್ಲಿರುವ ಒಂದು ಪ್ರದೇಶವಾದ ಸಾವಲಕ್ಷದಿಂದ ಬಂದಿರಬೇಕೆಂದು ನಂಬಲು ಆಧಾರಗಳಿವೆ.

ಬಡವರಾದ, ಆದರೆ ಸಂತೋಷದಿಂದ ಕೂಡಿದ ಇಂಥ ಇನ್ನೊಂದು ಕುಟುಂಬವೇ ಆಯ್ದಕ್ಕಿ ಮಾರಯ್ಯ ಹಾಗೂ ಅವನ ಪತ್ನಿ ಲಕ್ಕಮ್ಮರದು. ಬಸವಣ್ಣನವರು ಪ್ರತಿದಿನವೂ ಅಳತೆಯ ಪಾತ್ರೆಯೊಂದರ ತುಂಬ ಭಕ್ತರಿಗೆ

ಪಡಿ ಕೊಡುತ್ತಿದ್ದರು. ಅವರು ಹೀಗೆ ಮಾಡುವಾಗ ಧಾನ್ಯದ ಒಂದು ಭಾಗ ನೆಲದ ಮೇಲೆ ಬಿದ್ದು ವ್ಯರ್ಥವಾಗುತ್ತಿತ್ತು. ಮಾರಯ್ಯ ಕಣಜದ ಸಮೀಪ ಕಾಯುತ್ತಾ ನಿಂತಿದ್ದು ನೆಲದ ಮೇಲೆ ಬಿದ್ದ ಕಾಳುಗಳನ್ನು ಒಂದೊಂದಾಗಿ ಹೆಕ್ಕಿ ಮನೆಗೆ ಕೊಂಡೊಯ್ಯುತ್ತಿದ್ದ ಮತ್ತು ಅಡಿಗೆ ಮಾಡಲು ತನ್ನ ಮಡದಿಗೆ ಕೊಡುತ್ತಿದ್ದ. ಲಕ್ಕಮ್ಮ ಅವುಗಳಿಂದ ಅಡಿಗೆ ಮಾಡಿ ಮನೆಯ ವರಿಗೆ ಬಡಿಸುತ್ತಿದ್ದಳು ಹಾಗೂ ಅದರಲ್ಲಿಯೇ ಒಂದು ಭಾಗವನ್ನು ಇತರ ಭಕ್ತರಿಗೂ ಹಂಚುತ್ತಿದ್ದಳು. 'ಆಯ್ದಕ್ಕಿ' ಎಂದರೆ 'ಸಂಗ್ರಹಿಸಲಾದ ಅಕ್ಕಿ'! ಹೀಗೆ ಕಾಳುಗಳನ್ನು ಸಂಗ್ರಹಿಸುವುದೇ ಮಾರಯ್ಯನ ಕಾಯಕವಾಗಿತ್ತು. ಬಸವಣ್ಣನವರ ಮನೆಯಲ್ಲಿ ನಡೆದ ವಿಚಾರಗೋಷ್ಠಿಯೊಂದರಲ್ಲಿ ಕಾಯಕದ ಪ್ರಶ್ನೆ ಚರ್ಚೆಗೆ ಬಂತು. ವ್ಯಕ್ತಿಯ ಮೋಕ್ಷಕ್ಕೆ ಕಾಯಕವೊಂದೇ ಸಾಲದೆಂದೂ, ಪರಮಾತ್ಮನನ್ನು ಅರಿತರೆ ಮಾತ್ರ ಮೋಕ್ಷ ಲಭಿಸುವುದೆಂದೂ ವಾದಿಸ ಲಾಯಿತು. ಈ ಮಾತುಗಳಿಂದ ಬೇಸರಗೊಂಡ ಮಾರಯ್ಯ ಆಸಕ್ತಿ ಕಳೆದು ಕೊಂಡು ಆ ದಿನ ತನ್ನ ಕಾಯಕವನ್ನು ನಡೆಸಲಿಲ್ಲ. ಲಕ್ಕಮ್ಮ ಸಭೆಗೆ ಬಂದು, ತನ್ನ ಕೆಲಸದಲ್ಲಿ ಹಾಜರಾಗದ ಪತಿಯನ್ನು ನಯವಾಗಿ ಬಯ್ದಳು. ಮಾರಯ್ಯ ಕಣಜದತ್ತ ಧಾವಿಸಿ ಅವಸರವಸರದಿಂದ ಅಗತ್ಯ ವಿರುವುದಕ್ಕಿಂತ ಹೆಚ್ಚು ಕಾಳುಗಳನ್ನು ಸಂಗ್ರಹಿಸಿ ಮನೆಗೆ ತಂದ. ಹೆಚ್ಚು ಜಿಪುಣನಾದ ಬಗ್ಗೆ ಗಂಡನನ್ನು ಮತ್ತೆ ಲಕ್ಕಮ್ಮ ಜರಿದಳು ಹಾಗೂ "ಆಸೆ ಯೆಂಬುದು ಅರಸಿಂಗಲ್ಲದೆ ಶಿವಭಕ್ತರಿಗುಂಟೆ..." ಎಂದು ಬುದ್ಧಿವಾದ ಹೇಳಿ ಹೆಚ್ಚಿನ ಕಾಳುಗಳನ್ನು ಗಂಡನೊಡನೆ ಮರಳಿ ಕಳುಹಿಸಿದಳು. ಲಕ್ಕಮ್ಮ ಹಾಗೂ ಮಾರಯ್ಯನಂತಹ ಭಕ್ತರು, ಕಾಯಕದ ಸಿದ್ಧಾಂತಕ್ಕೆ ದೃಷ್ಟಾಂತ ನೀಡುವಂತಹ ಜೀವನವನ್ನು ಸಾಗಿಸಿ 'ಕಾಯಕವೇ ಕೈಲಾಸ' ಎಂಬುದನ್ನು ಲೋಕಕ್ಕೆ ತೋರಿಸಿದರು.

ಕಿನ್ನರಿ ಬೊಮ್ಮಯ್ಯ ಇನ್ನೊಬ್ಬ ಭಕ್ತ. ಕಿನ್ನರಿ ಬಾರಿಸುವುದೇ ಇವನ ಕಾಯಕವಾಗಿತ್ತು. ಇವನಿಗೆ ಕಿನ್ನರಯ್ಯನೆಂಬ ಹೆಸರೂ ಇತ್ತು. ಇವನ ಬಗ್ಗೆ ಬಸವಣ್ಣನವರಿಗೆ ಕೊಂಚ ವಾತ್ಸಲ್ಯವಿತ್ತು. ಇವರಿಬ್ಬರೂ ಆತ್ಮೀಯ ಸ್ನೇಹಿತ ರಾದರು. ಕಿನ್ನರಯ್ಯನಿಗೆ ಈರುಳ್ಳಿಯ ಬಗ್ಗೆ ತುಂಬ ಚಪಲ. ಒಂದು ದಿನ ಅವನು ಈರುಳ್ಳಿಯನ್ನು ಬಸವಣ್ಣನವರ ಮನೆಗೆ ತಂದು ಅವುಗಳ ಸಿಪ್ಪೆ ಸುಲಿಯುತ್ತಿದ್ದ. ಮನೆಗೆ ಬಂದ ಬಸವಣ್ಣನವರಿಗೆ ಈರುಳ್ಳಿಯ ತೀಕ್ಷ್ಣ ವಾಸನೆಯನ್ನು ಸಹಿಸಲು ಸಾಧ್ಯವಾಗಲಿಲ್ಲ. ಆ 'ಅಭೋಜ್ಯ ವಸ್ತು'ವನ್ನು (ಈರುಳ್ಳಿಯನ್ನು) ಮನೆಯೊಳಗೆ ತಂದವರಾರೆಂದು ಅವರು ಕಿರುಚಿದರು. ಬಸವಣ್ಣನವರ ಕೂಗಾಟ ಕೇಳಿದ ಕಿನ್ನರಯ್ಯನಿಗೆ ವ್ಯಥೆಯಾಯಿತು. ಅವನು ಕಲ್ಯಾಣವನ್ನೇ ತೊರೆದು ಸಮೀಪದ ಒಂದು ಹಳ್ಳಿಗೆ ಹೋದ. ಈ ವಿಚಾರ ಬಸವಣ್ಣನವರಿಗೆ ತಿಳಿಯಿತು. ಯಾರದೇ ಭಾವನೆಗಳಿಗೆ ನೋವನ್ನು ಉಂಟು

ಮಾಡುವ ಉದ್ದೇಶ ಅವರಿಗಿರಲಿಲ್ಲ. ನಡೆದ ಘಟನೆಯ ಬಗ್ಗೆ ಅವರು ವಿಷಾದಪಟ್ಟರು. 'ಕಿನ್ನರಯ್ಯನಿಗೆ ಉಳ್ಳಿಯಿಂದಲೇ ಮುನಿಸು ಉಂಟಾದು ದರಿಂದ ಉಳ್ಳಿಯಿಂದಲೇ ಆ ಮುನಿಸು ತೀರಬೇಕು' ಎಂದು ಯಾರೋ ಒಬ್ಬರು ಸಲಹೆ ನೀಡಿದಾಗ, ಬಸವಣ್ಣನವರು ಈರುಳ್ಳಿಯ ಒಂದು ಮೆರವಣಿಗೆಯ ಏರ್ಪಾಟನ್ನೇ ಮಾಡಿದರು. ಆನೆಗಳಿಗೂ ಕುದುರೆಗಳಿಗೂ ಈರುಳ್ಳಿಗಳಿಂದ ಅಲಂಕಾರ ಮಾಡಲಾಯಿತು. ಜನರು ಈರುಳ್ಳಿಯ ಹಾರ ಗಳನ್ನೂ ಕಡಗಗಳನ್ನೂ ಧರಿಸಿದರು. ಈರುಳ್ಳಿಯ ಧ್ವಜಗಳಿಂದ ಮನೆಗಳನ್ನೂ ಬೀದಿಗಳನ್ನೂ ಅಲಂಕರಿಸಲಾಯಿತು. ಸ್ವತಃ ಬಸವಣ್ಣನವರೂ ಈರುಳ್ಳಿಯ ದೊಡ್ಡ ಸರವನ್ನು ಹಾಕಿಕೊಂಡರು. ಕಿನ್ನರಯ್ಯ ಸಂತೋಷಪಟ್ಟ; ಮೆರವಣಿಗೆ ಯನ್ನು ನೋಡಿ ಅವನಿಗೆ ನಗುವೂ ಬಂತು. ಬಸವಣ್ಣನವರೊಂದಿಗೆ ಅವನ ಸ್ನೇಹ ಮತ್ತೆ ಸುಲಭವಾಗಿ ಪೂರ್ವ ಸ್ಥಿತಿಗೆ ಬಂತು. ಬಸವಣ್ಣನವರು ಶಿವ ಭಕ್ತರನ್ನು ತಮ್ಮ ಸ್ವಂತ ಜನರಲ್ಲಿ ಮುಖ್ಯರೆಂಬಂತೆ ಕಾಣುತ್ತಿದ್ದರು. ಅವರ ಈ ಗುಣಕ್ಕೆ ಸಂಬಂಧಿಸಿದಂತೆ ಒಂದು ಕಥೆಯಿದೆ. ಒಂದು ದಿನ ಕೆಲವು ಜಂಗಮರು ಬಸವಣ್ಣನವರಲ್ಲಿಗೆ ಬಂದರು. ಬಸವಣ್ಣನವರು ವಿಶ್ರಮಿಸಿ ಕೊಳ್ಳುತ್ತಿದ್ದಾರೆಂದೂ ತೊಂದರೆ ಕೊಡಬಾರದೆಂದೂ ಜಂಗಮರಿಗೆ ತಿಳಿಸ ಲಾಯಿತು. ಜಂಗಮರು ಹಿಂತಿರುಗಿದರು. ಅವರ ಜೊತೆ ಬಸವಣ್ಣನವರ ಪ್ರಾಣವೂ ಹೋಯಿತು. ಮಡದಿಯರು ಪತಿಯನ್ನು ಎಚ್ಚರಿಸಹೋದಾಗ ಅವರು ಮೃತರಾಗಿರುವುದನ್ನು ಕಂಡು ದಿಗಿಲುಗೊಂಡರು. ಅವರ ನೋವಿನ ಚೀರಾಟವನ್ನು ಕೇಳಿದ ಬಸವಣ್ಣನವರ ಕೆಲವು ನಿಕಟವರ್ತಿಗಳು ಧಾವಿಸಿ ಬಂದರು. ಅಂತರ್‌ದೃಷ್ಟಿಯ ಜ್ಞಾನದಿಂದ, 'ಬಸವಣ್ಣನವರು ಮಲಗಿ ನಿದ್ರಿ ಸುತ್ತಿದ್ದಾಗ ಯಾರಾದರೂ ಜಂಗಮರು ಬಂದಿದ್ದಾರೆಯೇ' ಎಂದು ಪ್ರಶ್ನಿ ಸಿದರು. 'ಹೌದು' ಎಂದು ಸೇವಕರು ಉತ್ತರಿಸಿದಾಗ, ಆ ಜಂಗಮರನ್ನು ಹುಡುಕಿಕೊಂಡು ಬರಲು ತತ್‌ಕ್ಷಣ ಆ ಸೇವಕರನ್ನೇ ಕಳುಹಿಸಲಾಯಿತು. ಜಂಗಮರು ಮತ್ತೆ ಬಸವಣ್ಣನವರ ಮನೆಗೆ ಬರುತ್ತಲೇ ಬಸವಣ್ಣನವರು ಜೀವ ತಳೆದರು. ಈ ಘಟನೆಯಿಂದಾಗಿ ಬಸವಣ್ಣನವರು 'ಜಂಗಮ ಪ್ರಾಣಿ' ಎಂದು ಹೆಸರಾದರು. ಬಸವಣ್ಣನವರ ಆತ್ಮ ತಮ್ಮ ಸ್ವಂತ ದೇಹದಲ್ಲಿ ಇರದೆ, ಜಂಗಮರ ದೇಹದಲ್ಲಿ ಇದ್ದಿತೆಂಬುದು ಇದರಿಂದ ಧ್ವನಿತವಾಗುತ್ತದೆ. ಮೇಲಿನಂಥ ಕಥೆಗಳು ಪ್ರಾಯಃ ಅನಂತರದ ಸೃಷ್ಟಿಗಳಾಗಿರಬಹುದು. ಹಾಗೂ ಬಸವಣ್ಣನವರಿಗೆ ತಮ್ಮ ಜನರಲ್ಲಿರುವಂತಹ ಅಗಾಧ ಪ್ರೇಮವನ್ನು ತೋರಿಸುವ ಉದ್ದೇಶದಿಂದಲೇ ಹುಟ್ಟಿಕೊಂಡ ಕಥೆಗಳಾಗಿರಬಹುದು.

ಚನ್ನಬಸವ ಬಸವಣ್ಣನವರ ಸೋದರಳಿಯ. ಅವನು ಬುದ್ಧಿವಂತ ಹಾಗೂ ಒಳ್ಳೆಯ ವಿದ್ವಾಂಸ. ಷಟ್‌ಸ್ಥಲ ಸಿದ್ಧಾಂತದ ಸಂಪೂರ್ಣವೂ ವ್ಯವಸ್ಥಿತವೂ ಆದ ವಿಷಯ ನಿರೂಪಣೆಯನ್ನು ಚನ್ನಬಸವನ ವಚನಗಳು ನಮಗೆ

ನೀಡುತ್ತವೆ.

ಬಸವಣ್ಣನವರ ಅನುಯಾಯಿಗಳು ಸಂಪೂರ್ಣ ವಾಕ್ ಸ್ವಾತಂತ್ರ್ಯವನ್ನು ಹೊಂದಿದ್ದರೆಂದು ಹಿಂದೆಯೇ ಹೇಳಿದ್ದೇವೆ. ಅವರ ಮನೆಯಲ್ಲಿ ನಿಯತಕಾಲಿಕ ಸಭೆಗಳು ನಡೆಯುತ್ತಿದ್ದವು. ಅಂಥ ಸಭೆಗಳಲ್ಲಿ ಭಕ್ತರು ಶಿವಗೀತೆಗಳನ್ನು ಹಾಡುತ್ತಿದ್ದರು; ಭಕ್ತಿ ಪರವಶತೆಯಿಂದ ನರ್ತಿಸುತ್ತಿದ್ದರು. ಕೆಲವು ಸಲ ಇಂಥ ಸಭೆಗಳು ವಿಚಾರಗೋಷ್ಠಿಗಳೂ ಆಗಿ ಅಲ್ಲಿ ಧಾರ್ಮಿಕ ವಿಷಯಗಳ ಬಗ್ಗೆ ಚರ್ಚೆ ನಡೆಯುತ್ತಿತ್ತು. (ಹಿಂದಿನ) ಉಚ್ಚಜಾತಿ (ಹಿಂದಿನ) ನೀಚಜಾತಿಯ ಜೊತೆ ಬೆರೆಯಿತು; ಮೋಚಿ ರಾಜ್ಯದ ಕೋಶಾಧಿಕಾರಿಯನ್ನು ಟೀಕಿಸಿದ; ಸ್ತ್ರೀಯರು ತಮ್ಮ ಭಾವನೆಗಳನ್ನು ಮುಕ್ತವಾಗಿ ವ್ಯಕ್ತಪಡಿಸಿದರು. ಪರಮಾತ್ಮನ ಸ್ವರೂಪ, ಷಟ್‌ಸ್ಥಲಗಳು, ಕಾಯಕದ ಮಹತ್ವ, ಲಿಂಗಧಾರಣೆಯ ಮಹತ್ವ, ಜಾತಿಗಳು, ಉತ್ತರಾಧಿಕಾರ, ಮತಾಂತರ ಹಾಗೂ ಪುನರ್ಮತಾಂತರಗಳಿಗೆ ಸಂಬಂಧಿಸಿದ ಸಮಸ್ಯೆಗಳು - ಇವು ಅಲ್ಲಿ ಚರ್ಚಿಸಲಾಗುತ್ತಿದ್ದ ಕೆಲವು ವಿಷಯಗಳಾಗಿದ್ದುವು. ಅನುಭಾವಿಗಳು ತಮ್ಮ ಅನುಭವಗಳನ್ನು ಇತರರೊಂದಿಗೆ ಹಂಚಿಕೊಳ್ಳುತ್ತಿದ್ದರು ಹಾಗೂ ಆಧ್ಯಾತ್ಮಿಕ ವಿಚಾರಗಳಲ್ಲಿ ತಮ್ಮ ಸಂಗಡಿಗರಿಗೆ ಮಾರ್ಗದರ್ಶನ ನೀಡುತ್ತಿದ್ದರು. ಇಂಥ ಸಭೆಗಳನ್ನು ಬೇರೆ ಬೇರೆ ಹೆಸರುಗಳಿಂದ ಕರೆಯಲಾಗಿತ್ತು. ಉದಾಹರಣೆಗೆ, 'ಅನುಭವಗೋಷ್ಠಿ', 'ಮಹಾನುಭಾವ ಪ್ರಸಂಗ', 'ಅನುಭವ ಮಂಟಪ' ಇತ್ಯಾದಿ. ಈ ವಿಚಾರಗೋಷ್ಠಿಗಳು ಬಸವಣ್ಣನವರ ಕ್ರಾಂತಿಯ ಅಪೂರ್ವ ಲಕ್ಷಣಗಳಾಗಿದ್ದುವು. ಅನೇಕ ಭಕ್ತರಿಗೆ ವಚನಗಳನ್ನು ರಚಿಸಲು ಅವುಗಳನ್ನು ಸಭೆಗಳಲ್ಲಿ ಹಾಡಲೂ ಇಲ್ಲಿ ಪ್ರೋತ್ಸಾಹ ಸಿಗುತ್ತಿತ್ತು.

ಬಸವಣ್ಣನವರು ಜನ ಸಮುದಾಯದ ಮುಖಂಡರಾಗಿದ್ದರು. ಅವರು ಜನರನ್ನು ಪ್ರೀತಿಸುತ್ತಿದ್ದರು; ಅವರ ನಡುವೆ ಇರಲು ಬಯಸುತ್ತಿದ್ದರು. ಅವರು ತಮ್ಮೆಲ್ಲ ಶಕ್ತಿ - ಉತ್ಸಾಹಗಳನ್ನು ಪಡೆದುದು ಎರಡೇ ಮೂಲಗಳಿಂದ -ದೇವರಿಂದ ಹಾಗೂ ತಮ್ಮ ಅನುಯಾಯಿಗಳಿಂದ-ಎನ್ನಬಹುದು.

ಜಲವ ತಪ್ಪಿದ ಮತ್ಸ್ಯ ಬದುಕುವುದೇ ಸೋಜಿಗ,
ಗಣತಿಂತಿಣಿಯೊಳಗಿರಿಸೆನ್ನನು, ಲಿಂಗವೇ,
ಶಿವ, ಶಿವಾ, ಕೂಡಲಸಂಗಮದೇವಾ,
ಸೆರಗೊಡ್ಡಿ ಬೇಡುವೆನು.

ಬಸವಣ್ಣನವರು ಜನ ಸಾಗರದಲ್ಲಿ ಒಂದು ಮೀನಿನಂತಿದ್ದರು. ಜನರಿಂದ ದೂರವಾಗಿ ಬದುಕಲು ಅವರಿಗೆ ಸಾಧ್ಯವಿರಲಿಲ್ಲ. ಇದಕ್ಕೆ ಪ್ರತಿಯಾಗಿ, ಜನರೂ ಅವರನ್ನು ಪ್ರೀತಿಸಿದರು ಮತ್ತು ನಿಷ್ಠೆಯಿಂದ ಅವರನ್ನು ಅನುಸರಿಸಿದರು.

# 9. ಕೊನೆಯ ದಿನಗಳು

ತಮ್ಮ ಬೋಧನೆಗಳನ್ನು ಜನಪ್ರಿಯಗೊಳಿಸಲು ಬಸವಣ್ಣನವರು ಮಾಡಿದ ನಿರಂತರ ಪ್ರಯತ್ನಗಳು ಫಲ ನೀಡಿದುವು. ಅವರ ಶಿಷ್ಯರ ಸಂಖ್ಯೆ ಹೆಚ್ಚಾಯಿತು. ತಮ್ಮ ಗುರುವಿನ ಸಂದೇಶವನ್ನು ಆ ಶಿಷ್ಯರು ಜನ ಸಮುದಾಯದಲ್ಲಿ ಬಿತ್ತಿದರು. ವೀರಶೈವ ಧರ್ಮ ಬಿಟ್ಟು ಉಳಿದ ಧರ್ಮಗಳಿಗೆ ಸೇರಿದ ಸದಸ್ಯರಿಗೆ ಇದು ಧೃತಿಗೆಡಿಸುವ ಅನುಭವವಾಗಿರಬೇಕು. ಬಸವಣ್ಣನವರಿಗೆ ಅಪಖ್ಯಾತಿ ತರುವ ಹೊಸ ಪ್ರಯತ್ನಗಳನ್ನು ಮಾಡುವಂತೆ ಭಯ ಹಾಗೂ ಮಾತ್ಸರ್ಯಗಳು ಅವರನ್ನು ಪ್ರಚೋದಿಸಿದುವು. ಧಾರ್ಮಿಕ ಹಾಗೂ ರಾಜಕೀಯ ವಿಚಾರಗಳಿಗೆ ಸಂಬಂಧಿಸಿದಂತೆ, ಬಸವಣ್ಣನವರೊಂದಿಗೆ ಹಿಂದೆ ಜಗಳವಾಡಿದ್ದಂತಹ ರಾಜಾಸ್ಥಾನದ ಅಧಿಕಾರಿಗಳೊಂದಿಗೆ ಕೂಡಲೇ ಆ ಜನರು ಸೇರಿದರು.

ಬಸವಣ್ಣನವರು ಹಾಗೂ ಅವರ ಕ್ರಾಂತಿಯನ್ನು ಕುರಿತು ಬಿಜ್ಜಳನ ದೃಷ್ಟಿಯಿಂದ ನಾವೀಗ ವಿಚಾರಮಾಡೋಣ. ಬಿಜ್ಜಳನು ಚಾಲುಕ್ಯ ಸಿಂಹಾಸನವನ್ನು ಅತಿಕ್ರಮಿಸಿದ ಮಹತ್ವಾಕಾಂಕ್ಷಿಯಾಗಿದ್ದ. ಹೀಗೆ ಸಿಂಹಾಸನ ದುರಾಕ್ರಮಣ ಮಾಡುವಾಗ ಪ್ರಾಯಃ ಅವನು ಆ ಸಿಂಹಾಸನದ ನ್ಯಾಯ ವಿಹಿತ ಅಧಿಕಾರಿಯನ್ನು ಕೊಂದಿದ್ದ. ಉಪಪ್ರಜ್ಞೆಯ ಹಂತದಲ್ಲಿಯೇ ಆಗಿದ್ದರೂ ಈ ಅಪರಾಧ ಪ್ರಜ್ಞೆ ಅವನ ಮನಸ್ಸನ್ನು ಕೊರೆಯುತ್ತಲೇ ಇತ್ತು. ಇಂಥ ವ್ಯಕ್ತಿಯೊಬ್ಬ ಸಾಮಾಜಿಕ ವ್ಯವಸ್ಥೆಯಲ್ಲಿ ಪರಿವರ್ತನೆಯನ್ನು ಉಂಟು ಮಾಡುವಂಥ ವಿಚಾರದಲ್ಲಿ ಆಸಕ್ತಿ ತಾಳದೆ ಇರುವುದೇನೂ ಆಶ್ಚರ್ಯವಲ್ಲ. ಅಲ್ಲದೆ ತಾನು ನಾಡಿನ ಸಾರ್ವಭೌಮನಾಗಿರುವಾಗ ತನ್ನ ಅಧೀನ ಅಧಿಕಾರಿಯೊಬ್ಬ ಜನ ಸಮುದಾಯದ ಮುಖಂಡನಾಗಿರುವುದು ಅವನಿಗೆ ಇಷ್ಟವಿರಲಿಲ್ಲ. ಹೀಗಾಗಿ ಬಸವಣ್ಣನವರ ಚಟುವಟಿಕೆಗಳಿಂದ ಅವನಲ್ಲಿ ಭಯ - ಮಾತ್ಸರ್ಯಗಳು ಮೂಡಿದವು.

ವರ್ಣ ಪದ್ಧತಿಯ ಸಂರಕ್ಷಣೆ ಮಾಡುವುದು ರಾಜನ ಪ್ರಮುಖ ಕರ್ತವ್ಯಗಳಲ್ಲಿ ಒಂದು ಎಂದು ಸಾಂಪ್ರದಾಯಿಕ ಹಿಂದೂ ಧರ್ಮದ ಧರ್ಮ ಶಾಸ್ತ್ರ ಗ್ರಂಥಗಳು ಗೊತ್ತುಪಡಿಸಿವೆ. ವಿವಾಹದ ಮೂಲಕ ವರ್ಣಸಂಕರ ಉಂಟಾಗದಂತೆಯೂ ರಾಜ ನೋಡಿಕೊಳ್ಳಬೇಕೆಂದು ಇವು ಗೊತ್ತುಪಡಿಸಿವೆ. ಬಸವಣ್ಣನವರ ಚಟುವಟಿಕೆಗಳು ವರ್ಣಸಂಕರಕ್ಕೆ ದಾರಿ ಮಾಡಿಕೊಟ್ಟವೆ ಎಂದೂ

ಅವರ ಕಣ್ಣೆದುರೇ ಇದು ನಡೆಯುತ್ತಿದೆಯೆಂದೂ ಅವರ ಶತ್ರುಗಳು ಬಿಜ್ಜಳನಲ್ಲಿ ದೂರು ಹೇಳಿದರು. ಪರಂಪರೆ ಪವಿತ್ರ ಹಾಗೂ ಅಮೂಲ್ಯ ವೆಂದು ಪರಿಗಣಿಸಿದ ಎಲ್ಲ ಮೌಲ್ಯಗಳನ್ನೂ ಬಸವಣ್ಣನವರು ಅಪಹಾಸ್ಯ ಗೊಳಿಸುತ್ತಿದ್ದಾರೆಂದು ಅವರು ಹೇಳಿದರಲ್ಲದೆ, ಅವರ ವಿರುದ್ಧ ಸೂಕ್ತ ಕ್ರಮವನ್ನು ಕೈಗೊಳ್ಳದೆ ಹೋದಲ್ಲಿ ಸಮಗ್ರ ಸನಾತನ ಧರ್ಮವೇ ನಾಶವಾಗಬಹುದೆಂದು ಎಚ್ಚರಿಕೆ ನೀಡಿದರು. ರಾಜನಾಗಿ ಬಿಜ್ಜಳ ತನ್ನ ಕರ್ತವ್ಯ ಗಳಲ್ಲಿ ವಿಫಲನಾಗಿದ್ದಾನೆ ಎಂಬ ಅಭಿಪ್ರಾಯವನ್ನು ಅವರು ವ್ಯಕ್ತಪಡಿಸಿದರು. ತಾನು ತಪ್ಪುಗಾರನೆಂಬ ಭಾವನೆ ಬಿಜ್ಜಳನಲ್ಲಿ ಉಂಟಾಗುವಂತೆ ಮಾಡಿದರು.

ಬಿಜ್ಜಳ ಸ್ವತಃ ಸಾಂಪ್ರದಾಯಿಕ ಶೈವಧರ್ಮದ ಅನುಯಾಯಿಯೂ ಶಿವನ ಆರಾಧಕನೂ ಆಗಿದ್ದ. ಬಸವಣ್ಣನವರ ಧಾರ್ಮಿಕ ಭಾವನೆಗಳು ಎಷ್ಟು ಸಂಪ್ರದಾಯ ವಿರುದ್ಧವಾಗಿದ್ದುವೆಂದರೆ ಅವು ಬಿಜ್ಜಳನಿಗೆ ರುಚಿಸದಾದುವು. ಅಲ್ಲದೆ ತನ್ನ ಸ್ವಧರ್ಮಕ್ಕೆ ವೀರಶೈವ ಧರ್ಮದಿಂದ ತೊಂದರೆಯುಂಟಾಗುವು ದನ್ನೂ ಬಿಜ್ಜಳ ಇಷ್ಟಪಡಲಿಲ್ಲ.

ಅನೇಕ ಸಂದರ್ಭಗಳಲ್ಲಿ ಬಿಜ್ಜಳ ಹಾಗೂ ಬಸವಣ್ಣನವರು ಕತ್ತಿ ಮಸೆದು ಹೋರಾಡಿದ್ದರು. ಅವರದು ಸ್ನೇಹ ಸಂಬಂಧವಾಗಿರಲಿಲ್ಲ. ಅಸ್ಪೃಶ್ಯರೊಂದಿಗೆ ಬೆರೆತ, ಹಾಗೂ ಅವರ ಜೊತೆ ಊಟ ಮಾಡಿದ ಬಸವಣ್ಣನವರನ್ನು ಕ್ಷಮಿಸುವುದು ಬಿಜ್ಜಳನಿಗೆ ಸಾಧ್ಯವಾಗಿರಲಿಲ್ಲ. ಅಲ್ಲದೆ ಅವರ ಮೇಲೆ ಇನ್ನಿತರ ಆಪಾದನೆಗಳೂ ಇದ್ದುವು. ಬಸವಣ್ಣನವರು ಹಾಗೂ ಅವರ ಆದರ್ಶವಾದವನ್ನು ಮೆಚ್ಚಲು ಕಾರಣಗಳಿದ್ದರೂ ಅವರನ್ನು ಹಾಗೂ ಅವರ ಆದರ್ಶವಾದವನ್ನು ಮೆಚ್ಚದಿರಲು ಕೂಡ ಕಾರಣಗಳಿದ್ದು ಅವುಗಳೇ ಪ್ರಬಲವಾಗಿದ್ದುವು. ಸಿಂಹಾಸನ ದುರಾಕ್ರಮಣ ಮಾಡಲು ನೆರವು ನೀಡಿದ್ದ ಸಾಮಂತರು ಹಾಗೂ ಇತರ ಮಂತ್ರಿಗಳು ಕೂಡ ಬಸವಣ್ಣನವರ ವಿರುದ್ಧ ತಮ್ಮದೇ ಆದ ದೂರುಗಳನ್ನು ನೀಡಿದ್ದರು. ಇವೆಲ್ಲ ಸಂಗತಿಗಳಿಂದಾಗಿ ಬಿಜ್ಜಳನಿಗೆ ಬಸವಣ್ಣನವರನ್ನೂ ಅವರ ಕ್ರಾಂತಿಯನ್ನೂ ಮನ್ನಿಸುವುದು ಸುಲಭವಾಗಿರಲಿಲ್ಲ.

ತನಗೆ ನೌಕರಿ ಕೊಟ್ಟ ಮೇಲಧಿಕಾರಿಯಾಗಿ ಬಸವಣ್ಣನವರಿಗೆ ಬಿಜ್ಜಳನ ಬಗ್ಗೆ ಕೆಲಮಟ್ಟಿನ ಗೌರವಭಾವನೆಯಿದ್ದಿತ್ತು. ಆದರೆ ಒಬ್ಬ ವ್ಯಕ್ತಿಯಾಗಿ ಅವನ ಮೇಲೆ ಹೆಚ್ಚೇನೂ ಗೌರವವಿದ್ದಿಲ್ಲ. ಸಾಮಾನ್ಯವಾಗಿ, ಯಾವುದೇ ರಾಜರ ಬಗ್ಗೆ ಬಸವಣ್ಣನವರಿಗೆ ಗೌರವ ಭಾವನೆಯಿದ್ದಿರಲಿಲ್ಲವೆನ್ನಬಹುದು. ಅರಸನ ಮನೆ ಯಲ್ಲಿ ಅರಸಿಯಾಗಿರುವುದಕ್ಕಿಂತ ಬಡವನಾದ ಭಕ್ತನ ಮನೆಯಲ್ಲಿ ತೊತ್ತಾಗಿರುವುದೇ ಲೇಸು ಎಂದು ಅವರು ತಮ್ಮ ವಚನವೊಂದರಲ್ಲಿ ಹೇಳಿ ದ್ದಾರೆ. ಬಿಜ್ಜಳನಿಗೆ ಜನರು ವಿಧೇಯರಾಗಿದ್ದುದು ಅವನ ಮೇಲಿನ ಪ್ರೇಮ ದಿಂದ ಅಥವಾ ಗೌರವದಿಂದ ಅಲ್ಲ; ಬದಲಾಗಿ ಭಯದಿಂದ ಎಂದು

ಬಸವಣ್ಣನವರಿಗೆ ಸಂಪೂರ್ಣವಾಗಿ ತಿಳಿದಿತ್ತು.

ವ್ಯಾಧನೊಂದು ಮೊಲನ ತಂದರೆ ಸಲುವ ಹಾಗಕ್ಕೆ ಬಿಲಿವರಯ್ಯಾ,
ನೆಲನಾಳ್ವನ ಹೆಣನೆಂದರೆ ಒಂದಡಕೆಗೆ ಕೊಂಬವರಿಲ್ಲ, ನೋಡಯ್ಯಾ!
ಮೊಲನಿಂದ ಕರಕಷ್ಟ ನರನ ಬಾಳುವೆ!
ಸಲೆನಂಬೋ ನಮ್ಮ ಕೂಡಲ ಸಂಗಮದೇವನ

ರಾಜರುಗಳು ಹಾಗೂ ಅವರ ಶ್ರೀಮಂತಿಕೆಯ ಬಗ್ಗೆ ಬಸವಣ್ಣನವರಿಗಿದ್ದ ಜುಗುಪ್ಸೆ ಅವರ ಅನೇಕ ವಚನಗಳಲ್ಲಿ ಅಭಿವ್ಯಕ್ತಿ ಪಡೆದಿದೆ.

ಬಿಜ್ಜಳ ತಮ್ಮನ್ನು ಇಷ್ಟಪಟ್ಟಿಲ್ಲ ಎಂಬುದು ಅವರಿಗೆ ತಿಳಿದಿತ್ತು. ಯಾವನೇ ವ್ಯಕ್ತಿಗೂ ತನ್ನನ್ನು ಆಳುವವನ ಅಸಂತೋಷಕ್ಕೆ ಗುರಿಯಾಗಿ ರಾಜ್ಯ ದಲ್ಲಿ ಬದುಕಿ ಉಳಿಯುವುದು ಕಷ್ಟವೆಂಬ ವಾಸ್ತವಸಂಗತಿಯೂ ಅವರಿಗೆ ತಿಳಿಯದೆ ಇದ್ದಿರಲಿಲ್ಲ. ಬಸವಣ್ಣನವರ ಅನೇಕ ವಚನಗಳಲ್ಲಿ ಬಿಜ್ಜಳನ ಉಲ್ಲೇಖವಿದೆ; ಆದರೆ ಎಲ್ಲಿಯೂ ಅವನ ಬಗ್ಗೆ ಗೌರವದ ಮಾತು ಕಂಡು ಬರುವುದಿಲ್ಲ.

ಬಸವಣ್ಣನವರ ಪ್ರಾಮಾಣಿಕತೆಯನ್ನು ಬಿಜ್ಜಳ ಪರೀಕ್ಷಿಸಲು ಬಯಸಿದ ನೆಂಬುದನ್ನು ನಾವು ಹಿಂದೆಯೇ ನೋಡಿದ್ದೇವೆ. ಅನೇಕ ಸಂದರ್ಭಗಳಲ್ಲಿ ಬಸವಣ್ಣನವರನ್ನು ಅಪಹಾಸ್ಯಮಾಡಿ ಅವರನ್ನು ಮೂರ್ಖರನ್ನಾಗಿ ಮಾಡಲು ಕೂಡ ಬಿಜ್ಜಳ ಪ್ರಯತ್ನಿಸಿದ್ದುಂಟು. ಆದರೆ ಅವನೇ ಹೇಗೆ ಮೂರ್ಖನಾದ ಎಂದು ಮುಂದೆ ವೀರಶೈವ ಲೇಖಕರಿಂದ ನಿರೂಪಿತವಾದ ಅನೇಕ ಕಥೆಗಳು ತಿಳಿಸುತ್ತವೆ. ಹೀಗಿದ್ದರೂ ಬಿಜ್ಜಳ ತನ್ನ ಮೇಲೆ ತೋರಿಸಿದ ಎಲ್ಲ ಅವಕೃಪೆ ಗಳನ್ನೂ ಬಸವಣ್ಣನವರು ಸಹಿಸಿದರು. ಆದರೆ ವೀರಶೈವ ಸಮಾಜ ಮಾತ್ರ ಕುದಿಯುತ್ತಾ ಇತ್ತು; ತನ್ನ ಮುಖಂಡರಾದ ಬಸವಣ್ಣನವರಿಗೆ ಆಗುತ್ತಾ ಇರುವ ತೋಜೋವಧೆಗೆ ಪ್ರತೀಕಾರ ಮಾಡಲು ಸಮಯವನ್ನೆ ಕಾಯುತ್ತಿತ್ತು. ವೀರಶೈವರ ದೃಷ್ಟಿಯಲ್ಲಿ ಇದು ಇಬ್ಬರು ವ್ಯಕ್ತಿಗಳ ನಡುವಣ ಘರ್ಷಣೆ ಯಾಗಿರದೆ ವಿಚಾರಗಳ ನಡುವಣ ಸಂಘರ್ಷವಾಗಿತ್ತು. ತಮ್ಮ ಧರ್ಮದ ಹಾಗೂ ಕ್ರಾಂತಿಯ ಪ್ರಗತಿಯ ಮಾರ್ಗದಲ್ಲಿ ಬಿಜ್ಜಳ ಅಡ್ಡಿಯಾಗಿದ್ದಾನೆಂದು ಅವರು ಭಾವಿಸಿದರು.

ಈ ಹಿನ್ನೆಲೆಯನ್ನು ಮನಸ್ಸಿನಲ್ಲಿರಿಸಿಕೊಂಡು ಬಸವಣ್ಣನವರ ಕೊನೆಯ ದಿನಗಳಲ್ಲಿ ಘಟಿಸಿದ ವಿದ್ಯಮಾನಗಳ ಬಗ್ಗೆ ಈಗ ಪರಿಶೀಲಿಸೋಣ.

ಕಲ್ಯಾಣದಲ್ಲಿ ಜಗದೇವನೆಂಬ ಒಬ್ಬ ಅಧಿಕಾರಿಯಿದ್ದ. ಬಸವಣ್ಣನವರ ಬೋಧನೆಗಳಿಂದ ಆಕರ್ಷಿತನಾದ ಅವನು ವೀರಶೈವಧರ್ಮವನ್ನು ಸ್ವೀಕರಿಸಿದ. ಒಂದು ದಿನ ಅವನು ಬಸವಣ್ಣನವರನ್ನೂ ಅವರ ಕೆಲವು ಸಂಗಡಿಗರನ್ನೂ ತನ್ನ ಮನೆಗೆ ಊಟಕ್ಕೆ ಬರುವಂತೆ ಆಹ್ವಾನಿಸಿದ. ಅವರು ಜಗದೇವನ ಆಹ್ವಾನ ವನ್ನು ಸ್ವೀಕರಿಸಿದರು. ಆದರೆ ಅವರು ಜಗದೇವನ ಮನೆಗೆ ಹೋಗುವ

ಮೊದಲೇ ಅವನು ಕೆಲವು ಬ್ರಾಹ್ಮಣರನ್ನು ಕರೆದು ಆತಿಥ್ಯ ನೀಡಿದ್ದ. ಬಸವಣ್ಣನವರಿಗೆ ಇದು ತಿಳಿದಾಗ, ಅವರು ಜಗದೇವನ ಆತಿಥ್ಯ ಸ್ವೀಕರಿಸಲು ಸ್ಪಷ್ಟವಾಗಿ ನಿರಾಕರಿಸಿದರು. ತನ್ನ ವರ್ತನೆಗಾಗಿ ಜಗದೇವನಿಗೆ ಪಶ್ಚಾತ್ತಾಪವಾಯಿತು. ವೀರಶೈವಧರ್ಮದ ಶತ್ರುವೊಬ್ಬನನ್ನು ಕೊಲ್ಲುವುದರ ಮೂಲಕ, ತನ್ನ ಪಾಪ ಕಾರ್ಯಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ಳುವುದಾಗಿ ಅವನು ಪ್ರತಿಜ್ಞೆ ಮಾಡಿದ.

ಕಲ್ಯಾಣನಗರದಲ್ಲಿಯೇ ಇಬ್ಬರು ಶಿವಭಕ್ತರಿದ್ದರು. ಅವರೇ ಅಲ್ಲಯ್ಯ ಹಾಗೂ ಮಧುವಯ್ಯ. ಅಲ್ಲಯ್ಯ ಜನ್ಮತಃ ಅಸ್ಪೃಶ್ಯ; ಮಧುವಯ್ಯ ಬ್ರಾಹ್ಮಣ. ಇಬ್ಬರೂ ಮಿತ್ರರಾಗಿದ್ದರಲ್ಲದೆ, ಬಸವಣ್ಣನವರ ಬೋಧನೆಗಳನ್ನು ಅನುಸರಿಸುತ್ತಿದ್ದರು. ಮಧುವಯ್ಯ ತನ್ನ ಮಗಳನ್ನು ಅಲ್ಲಯ್ಯನ ಮಗನಿಗೆ ಮದುವೆ ಮಾಡಿಕೊಡಬಯಸಿದ್ದ. ಈ ಮದುವೆಗೆ ಬಸವಣ್ಣನವರೂ ಸಮ್ಮತಿ ನೀಡಿದ್ದರು. ಈ ವಿವಾಹದ ಪ್ರಸ್ತಾಪದಿಂದ ಇಡೀ ವೀರಶೈವ ಸಮಾಜ ಆನಂದಭರಿತವಾಗಿತ್ತು. 'ಉಚ್ಚ' ಜಾತಿಯವರು 'ನೀಚ' ಜಾತಿಯವರೊಡನೆ ಊಟ ಮಾಡುವುದನ್ನು ಸಂಪ್ರದಾಯಶೀಲರು ಕಂಡಿದ್ದರು ಹಾಗೂ ಕೇಳಿದ್ದರು. ಆದರೆ ಇಂಥ ಮದುವೆಯ ವಿಚಾರ ಮಾತ್ರ ಅವರು ಕನಸಿನಲ್ಲಿಯೂ ಕಾಣದಂತಹುದಾಗಿತ್ತು. ಅವರು ಅತ್ಯಂತ ಮನಃಕ್ಷೋಭೆಗೊಂಡರು; ಪ್ರಸ್ತಾಪಿತ ಮದುವೆಯ ಬಗ್ಗೆ ಬಿಜ್ಜಳನಲ್ಲಿಗೆ ದೂರನ್ನು ತೆಗೆದುಕೊಂಡು ಹೋದರು. ಮದುವೆಯನ್ನು ನಿಲ್ಲಿಸುವಂತೆ ಅಲ್ಲಯ್ಯ ಮತ್ತು ಮಧುವಯ್ಯರಿಗೆ ಬಿಜ್ಜಳ ಆಜ್ಞೆ ಮಾಡಿದ. ಆದರೆ ಅವರಿಬ್ಬರೂ ಬಿಜ್ಜಳನ ಮಾತಿನಂತೆ ನಡೆಯಲು ಒಪ್ಪಲಿಲ್ಲ. ಏನೇ ಬರಲಿ; ಈ ಮದುವೆಯನ್ನು ನಡೆಸಿಯೇ ಸಿದ್ಧ ಎಂದು ನಿರ್ಧರಿಸಿದರು. ಬಿಜ್ಜಳನ ಬುದ್ಧಿ ಕೆಟ್ಟು ಹೋದಂತಾಗಿ ಅವರಿಬ್ಬರ ಕಣ್ಣುಗಳನ್ನೂ ಕೀಳುವಂತೆ ಅವನು ಆಜ್ಞೆ ಮಾಡಿದ.

ಈ ಘಟನೆ ವೀರಶೈವರಲ್ಲಿ ಪ್ರತಿಭಟನೆಯ ಬಿರುಗಾಳಿಯನ್ನು ಎಬ್ಬಿಸಿತು. ಬಿಜ್ಜಳನ ಈ ವರ್ತನೆಯನ್ನು ಅನುಸರಿಸಿ, ಇಂಥದೇ ಅಥವಾ ಇದಕ್ಕಿಂತ ಹೆಚ್ಚು ಕ್ರೂರವಾದ ಘಟನೆಗಳು ಸಂಭವಿಸುವ ಸಾಧ್ಯತೆ ಇದೆಯೆಂದು ಅವರು ಭಾವಿಸಿದರು. ಬಿಜ್ಜಳ ಬದುಕಿರುವವರೆಗೆ, ತಾವಾಗಲಿ ತಮ್ಮ ಧರ್ಮವಾಗಲಿ ಸುರಕ್ಷಿತವಲ್ಲವೆಂದು ಅವರು ತಮ್ಮಲ್ಲಿಯೆ ಹೇಳಿಕೊಂಡರು. ಒಂದು ತುರ್ತು ಸಭೆಯನ್ನು ಕರೆದ ಅವರು ಇದಕ್ಕೆ ಹಾಜರಾಗುವಂತೆ ಜಗದೇವನಿಗೂ ಆಹ್ವಾನ ನೀಡಿದರು. ಜಗದೇವನ ಪ್ರತಿಜ್ಞೆಯನ್ನು ನೆನಪಿಗೆ ತಂದಾಗ, ಅವನು ಬಿಜ್ಜಳನ ಕೊಲೆ ಮಾಡಲು ಸಂತೋಷದಿಂದಲೇ ಒಪ್ಪಿದ. ಬಿಜ್ಜಳನ ಹತ್ಯೆಯ ಹೊಣೆಯನ್ನು ಜಗದೇವನಿಗೆ ವಹಿಸಿ ಬಸವಣ್ಣನವರೂ ಅವರ ಅನುಯಾಯಿಗಳೂ ಕಲ್ಯಾಣವನ್ನು ಬಿಟ್ಟು ಹೊರಟು ಹೋದರು. ಬಸವಣ್ಣನವರ ಮುಖಂಡತ್ವದಲ್ಲಿ ಒಂದು ತಂಡ ಕೂಡಲಸಂಗಮಕ್ಕೂ

ಚನ್ನಬಸವ ನೇತೃತ್ವದಲ್ಲಿ ಇನ್ನೊಂದು ತಂಡ ಉಳಿವೆಗೂ (ಕರ್ನಾಟಕದ ಉತ್ತರ ಕನ್ನಡ ಜಿಲ್ಲೆಯ ಒಂದು ಸ್ಥಳ) ಹೊರಟಿತು.

ಜಗದೇವ ಮನೆಗೆ ಹೋದ. ತಾಯಿ ಅವನಿಗೆ ಊಟ ಬಡಿಸಲು ಒಪ್ಪಲಿಲ್ಲ. ಕೈಗೊಂಡ ಪ್ರತಿಜ್ಞೆಯನ್ನು ಪೂರೈಸುವತನಕ ಅವನನ್ನು ನಾಯಿಯಂತೆ ಕಾಣುವುದಾಗಿ ಅವಳು ತಿಳಿಸಿದಳು; ಅವನಿಗೆ ನೆಲದ ಮೇಲೆಯೇ ಅನ್ನ ಹಾಕಿದಳು. ತುಂಬ ಹಸಿವಾಗಿದ್ದುದರಿಂದ ಜಗದೇವ ಅದನ್ನೇ ತಿಂದ. ಬಸವಣ್ಣನವರ ಇನ್ನಿಬ್ಬರು ಅನುಯಾಯಿಗಳಾದ ಮೊಲ್ಲೆ ಮತ್ತು ಬೊಮ್ಮರೂ ಜಗದೇವನೊಂದಿಗೆ ಸೇರಿದರು. ಆಗ ಸಂಜೆಯ ಸಮಯ; ಭವ್ಯ ದೀಪಾಲಂಕೃತವಾದ ಅರಮನೆಯ ಸಭಾಂಗಣದಲ್ಲಿ ಬಿಜ್ಜಳ ಕುಳಿತಿದ್ದ, ಅವನಿಗೆ ಸಾರ್ವಜನಿಕರು ಗೌರವ ನೀಡಿತ್ತಿದ್ದರು. ಜಗದೇವನೂ ಅವನ ಸಹಾಯಕರೂ ಸಭಾಂಗಣಕ್ಕೆ ಧಾವಿಸಿ ಬಂದರು; ಥಟ್ಟನೆ ಅವನ ಮೇಲೆ ಎರಗಿ, ಅವನನ್ನು ಕೊಂದು ತಮ್ಮ ಧರ್ಮದ ಶತ್ರು ಮೃತನಾದನೆಂದು ಘೋಷಿಸಿದರು.(ಈ ಘಟನೆ, ಬಿಜ್ಜಳನ ಆಳ್ವಿಕೆಯ ಕೊನೆಯ ವರ್ಷವಾದ ಕ್ರಿ.ಶ 1167ರಲ್ಲಿ ನಡೆದಂತೆ ಕಾಣುತ್ತದೆ) ಜಗದೇವ ಸ್ವತಃ ತನ್ನನ್ನು ಕೊಂದುಕೊಂಡ. ಉಳಿದ ಇಬ್ಬರು ಪ್ರಾಯಃ ಸೆರೆಸಿಕ್ಕರು ಹಾಗೂ ಅನಂತರದ ಗಲಭೆಯಲ್ಲಿ ಇತರ ಅನೇಕರೊಂದಿಗೆ ಹತರಾದರು.

ಕಲ್ಯಾಣದಿಂದ ಹೊರಟು ಹೋದ ಎರಡೂ ತಂಡಗಳವರನ್ನು ಹುಡುಕುತ್ತಾ ಬಿಜ್ಜಳನ ಸೈನ್ಯ ಹೊರಟಿತು. ಆ ಸೈನ್ಯ ಚನ್ನಬಸವನ ನೇತೃತ್ವದ ತಂಡದೊಂದಿಗೆ ಹೋರಾಡಿದಂತೆ ಹಾಗೂ ಕೊನೆಯಲ್ಲಿ ತನ್ನವರನ್ನು ಉದ್ದಿಷ್ಟ ಸ್ಥಳಕ್ಕೆ ಕರೆದೊಯ್ಯಲು ಚನ್ನಬಸವ ಸಮರ್ಥನಾದಂತೆ ಕಂಡುಬರುತ್ತದೆ.

ಈ ನಡುವೆ ಬಸವಣ್ಣನವರು ಕೂಡಲಸಂಗಮ ತಲುಪಿದ್ದರು. ಅವರ ಮನಸ್ಸು ಕ್ಷೋಭೆಗೊಂಡಿತ್ತು. ಅವರು ಶಾಂತಿ ಬಯಸಿದ್ದರು. ಕೂಡಲ ಸಂಗಮದಲ್ಲಿ ನದಿಗಳು ಸೇರುವ ಅದೇ ಸಂಗಮಸ್ಥಳವಿತ್ತು; ಅವೇ ಗದ್ದೆ ಬಯಲುಗಳಿದ್ದವು; ಅದೇ ಸುಂದರ ದೃಶ್ಯವಿತ್ತು. ಈ ಪರಿಸರ ಅವರಿಗೆ ಕೊಂಚ ಶಾಂತಿ ಸಮಾಧಾನಗಳನ್ನು ನೀಡಿದ್ದರಲ್ಲಿ ಸಂದೇಹವಿಲ್ಲ. ಆದರೆ ತನ್ನ ಗುರಿ ಸಾಧನೆಯಾಗಿದೆಯೆಂದು ಅವರಿಗೆ ಅನ್ನಿಸತೊಡಗಿತ್ತು. ಹೋರಾಟವನ್ನು ಮುಂದುವರಿಸುವ ಕೆಲಸ ಅವರ ಅನುಯಾಯಿಗಳದಾಗಿತ್ತು. ತಮ್ಮ ಅಂತ್ಯ ಸಮೀಪಿಸುತ್ತದೆಯೆಂದು ಅವರಿಗೆ ತಿಳಿದಿತ್ತು. ಅವರು ಅದನ್ನು ಬಯಸಿಯೂ ಇದ್ದರು. ಅವರ ಮಡದಿ ನೀಲಲೋಚನೆ ಕಲ್ಯಾಣದಲ್ಲಿಯೆ ಉಳಿದಿದ್ದಳು. ಇದಕ್ಕೇನು ಕಾರಣವೆಂದು ನಮಗೆ ತಿಳಿದಿಲ್ಲ. ಬಸವಣ್ಣನವರು ತಮ್ಮ ಸಂಗಡಿಗರಲ್ಲಿ ಒಬ್ಬನಾದ ಅಪ್ಪಣ್ಣನೆಂಬುವನನ್ನು ಹೆಂಡತಿಯನ್ನು ಕೂಡಲ ಸಂಗಮಕ್ಕೆ ಕರೆತರಲು ಕಳುಹಿಸಿದರು. ಅವನು ಕಲ್ಯಾಣಕ್ಕೆ ಬಂದ; ಬಸವಣ್ಣನವರು 'ಶಿವೈಕ್ಯರಾಗಲು ಹೊರಟದ್ದಾರೆ'ಂದು ಅವಳಿಗೆ ತಿಳಿಸಿದ;

ಅವಳು ಕೂಡಲಸಂಗಮಕ್ಕೆ ಬರಬೇಕೆಂದು ಬಸವಣ್ಣನವರು ಬಯಸುತ್ತಿದ್ದಾರೆಂದೂ ಹೇಳಿದ. ಆದರೆ ಕೂಡಲಸಂಗಮಕ್ಕೆ ಬರಲು ನೀಲಲೋಚನೆ ಆಶ್ಚರ್ಯಕರವಾದ ರೀತಿಯಲ್ಲಿ ನಿರಾಕರಿಸಿದಳು. ದೇವರು ಎಲ್ಲೆಡೆಯೂ ಇರುವುದರಿಂದ, ತಾನು ಕಲ್ಯಾಣದಲ್ಲಿಯೆ ಅವನೊಡನೆ ಐಕ್ಯಳಾಗುತ್ತೇನೆಂದು ತಿಳಿಸಿದಳು. ಬಿಜ್ಜಳ ಮೃತನಾದ ನಂತರ ಕೆಲವು ಕಾಲ ಮಾತ್ರ ಬಸವಣ್ಣನವರು ಬದುಕಿದಂತೆ ಕಾಣುತ್ತದೆ. ಸುಮಾರು ಕ್ರಿ.ಶ. 1167-68ರಲ್ಲಿ ಅವೇ ನದಿಗಳ ಆ ಸಂಗಮ ಸ್ಥಳದಲ್ಲಿಯೆ ಅವರು ತಮ್ಮ ಕೊನೆಯುಸಿರನ್ನು ಎಳೆದರು. 'ತೆರೆ ಸಮುದ್ರದಲ್ಲಿ ಸುಳಿಗಾಳಿ ಗಾಳಿಯಲ್ಲಿ ಅಡಗುವಂತೆ' ಅವರು ಅನಂತದೊಂದಿಗೆ ಒಂದಾಗಿ ಹೋದರು. ಮಾಚಯ್ಯ ಹೇಳಿದಂತೆ, 'ಅವರು ಬೆಳಗನುಟ್ಟು ಬಯಲಾಗಿ[1] ಹೋದರು' ಅವರ ಸಾವಿನ ಸುದ್ದಿ ತಿಳಿದ ನೀಲಲೋಚನೆ 'ಅವರು ಕಾಯವಿಲ್ಲದ ದೇಹಿಯಾದರು' ಎಂದು ಹೇಳುತ್ತ ವಿಲಾಪಿಸಿದಳು. ಹಾಗೂ ಬಸವಣ್ಣನವರನ್ನು ಹಿಂಬಾಲಿಸಿದಳು. ಬಸವಣ್ಣನವರ ಭಕ್ತಿಯೆಂಬ ಕಾಂತಿಯಿಂದ ತುಂಬಿದ ದೀಪಕ್ಕೆ ಕಲ್ಯಾಣನಗರವನ್ನು ಶರಣರು ಹೋಲಿಸಿದ್ದರು. ಆ ದೀಪ ಅನೇಕರಿಗೆ ಬೆಳಕು ಬೀರಿತ್ತೆಂದು ಅವರು ನುಡಿದರು. ಆದರೆ ಈಗ ಹಣತೆ ಮುರಿದು ಹೋಗಿತ್ತು; ಎಣ್ಣೆ ಚೆಲ್ಲಿಹೋಗಿತ್ತು. ಆದರೂ ಆ ಬೆಳಕು ದೈವೀಪ್ರಕಾಶದೊಂದಿಗೆ ಒಂದಾಗಿತ್ತು.

ಬಿಜ್ಜಳನ ಮರಣಾನಂತರ ಸಂಭವಿಸಿದ ಮಹಾಕ್ಷೋಭೆಯಿಂದಾಗಿ, ಕಲ್ಯಾಣನಗರ ಬುಡಮುಟ್ಟ ನಡುಗಿತೆಂಬುದೇನೋ ನಿಜ. ಬಿಜ್ಜಳನ ಮಗನಾದ ಮುರಾರಿ ಸೋವಿದೇವ ತಂದೆಯ ಉತ್ತರಾಧಿಕಾರಿಯಾದ. ಆದರೆ ಅವನು ಎರಡು ದಿಕ್ಕುಗಳಿಂದ-ತಾನು ಹಿಂದೆ ಕಿರುಕುಳ ಕೊಟ್ಟಿದ್ದಂತಹ ಬಸವಣ್ಣನವರ ಅನುಯಾಯಿಗಳಿಂದ ಹಾಗೂ ಪದಚ್ಯುತರಾದ ಚಾಲುಕ್ಯ ರಾಜರ ಬಗ್ಗೆ ಸಹಾನುಭೂತಿಪರರಾಗಿದ್ದ ಜನರಿಂದ-ವಿರೋಧವನ್ನು ಎದುರಿಸಬೇಕಾಗಿ ಬಂತು. ಅವನು ಹೆಚ್ಚು ಸಮಯ ಆಳ್ವಿಕೆ ನಡೆಸಲಿಲ್ಲ. ಮುಂದೆ ಅವನ ನಾಲ್ವರು ಸೋದರರೂ ಅತ್ಯಲ್ಪಕಾಲದಲ್ಲಿಯೇ ಒಬ್ಬರ ಅನಂತರ ಇನ್ನೊಬ್ಬರಂತೆ ರಾಜ್ಯಾಡಳಿತ ನಡೆಸಿದರು. ಬಿಜ್ಜಳನಿಂದ ಉಚ್ಚಾಟಿಸಲ್ಪಟ್ಟ ಮೂರನೆಯ ತೈಲನಿಗೆ ಒಬ್ಬ ಮಗನಿದ್ದ. ಅವನೇ ನಾಲ್ಕನೆಯ ಸೋಮೇಶ್ವರ. ಆಗ ಅವನಿನ್ನೂ ಬದುಕಿದ್ದ. ಬರ್ಮನೆಂಬ ಸಮರ್ಥ ಸೈನ್ಯಾಧಿಕಾರಿಯ ನೇತೃತ್ವದಲ್ಲಿ ಅವನೊಂದು ಸೈನ್ಯ ಕಟ್ಟಿ ಕ್ರಿ.ಶ.1184ರಲ್ಲಿ ತನ್ನ ತಂದೆಯ ಸಾಮ್ರಾಜ್ಯವನ್ನು ಪುನಃ ಸಂಪಾದಿಸುವುದರಲ್ಲಿ ಯಶಸ್ವಿಯಾದ. ಹೀಗೆ ಸ್ವಲ್ಪ

---

1. ವೀರಶೈವಧರ್ಮದ ಅನುಸಾರ ದೇವರು ಆಕಾರನೂ ಹೌದು, ನಿರಾಕಾರನೂ ಹೌದು; ಕೆಲವು ಸಲ ದೇವರನ್ನು 'ಶೂನ್ಯ' ಎಂದು ಪರಿಗಣಿಸಲಾದರೂ ಇದು ಪೂರ್ಣದ ಇನ್ನೊಂದು ಹೆಸರೂ ಹೌದು.

ಸಮಯ ಮಾತ್ರ ಬಾಳಿದ ಕಲಚುರಿಗಳ ಸಾಮ್ರಾಜ್ಯ ಕೊನೆಗೊಂಡಿತು. ಚಾಲುಕ್ಯ ಸಾಮ್ರಾಜ್ಯವೂ ಬಹು ಕಾಲ ಬಾಳಲಿಲ್ಲವೆಂಬುದೂ ದುರದೃಷ್ಟಕರವಾದ ವಿಚಾರವೇ ಆಗಿದೆ. ಕ್ರಿಶ-1190ರಲ್ಲಿ ಚಾಲುಕ್ಯ ರಾಜ್ಯವನ್ನು ಉತ್ತರದಲ್ಲಿ ದೇವಗಿರಿಯ ಯಾದವರೂ ದಕ್ಷಿಣದಲ್ಲಿ ದೋರಸಮುದ್ರದ ಹೊಯ್ಸಳರೂ ವಶಪಡಿಸಿಕೊಂಡರು.

ತಮ್ಮ ಬೆನ್ನಹಿಂದೆ ನಿಷ್ಠಾವಂತ ಸೇವಕರ ತಂಡವೊಂದನ್ನು ಅಥವಾ ಅದಕ್ಕಿಂತ ಮಿಗಿಲಾಗಿ ಮಹಾ ವಿಚಾರಧಾರೆಯೊಂದನ್ನು ಬಸವಣ್ಣನವರು ಬಿಟ್ಟು ಹೋಗಿದ್ದರು. ಚನ್ನಬಸವ ಹಾಗೂ ಮಡಿವಾಳ ಮಾಚಯ್ಯರಂತಹ ಕಾರ್ಯಕರ್ತರು ಅವರ ಕೆಲಸವನ್ನು ಮುಂದುವರಿಸಿದರು. ಸಾಮಾಜಿಕ ದೃಷ್ಟಿಕೋನದಲ್ಲಿಯೇ ಬಸವಣ್ಣನವರು ಸಂಪೂರ್ಣ ಪರಿವರ್ತನೆಯನ್ನು ಉಂಟುಮಾಡಿದ್ದರು; ಜನರ ಮನಸ್ಸಿನಲ್ಲಿ ಕ್ರಾಂತಿಯ ಬೀಜವನ್ನು ಬಿತ್ತಿದ್ದರು. ಈ ಕ್ರಾಂತಿ ಬೇಗನೆ ಫಲ ಬಿಟ್ಟಿತೆಂಬುದು ಖಂಡಿತವಾಗಿಯೂ ನಿಜ. ಉದಾಹರಣೆಗೆ, ಹದಿಮೂರನೆಯ ಶತಮಾನದ ಕ್ರಾಂತಿಕಾರಿ ಕವಿಗಳಾದ ಹರಿಹರ ಮತ್ತು ರಾಘವಾಂಕರು ಬಸವಣ್ಣನವರು ಮತ್ತಿತರ ಶರಣರಿಂದಲೇ ಸ್ಫೂರ್ತಿಗೊಂಡರೆಂಬುದು ನಿಜ. ಈ ಕವಿಗಳಿಬ್ಬರೂ ಬಸವಣ್ಣನವರ ಕ್ರಾಂತಿಯ ಉತ್ಪನ್ನಗಳಾಗಿದ್ದಾರೆ. ಆದರೆ ಸ್ವತಃ ವೀರಶೈವ ಧರ್ಮವೂ, ಎಲ್ಲ ಅನಮ್ಯತೆ, ಪುರೋಹಿತಪ್ರಭುತ್ವ ಹಾಗೂ ಸಾಂಸ್ಥಿಕತೆಗಳೊಂದಿಗೆ ಇತರ ಧರ್ಮಗಳಂತೆಯೆ ಒಂದು ಸಂಘಟಿತ ಧರ್ಮವಾಗಿ ಪರಿಣಮಿಸಿದುದು ಮಾತ್ರ ದುರದೃಷ್ಟಕರ ವಿಚಾರವಾಗಿದೆ. ಅನಂತರ ವೀರಶೈವ ಧರ್ಮ ಜನಪ್ರಿಯವಾಗುತ್ತ ಮುನ್ನಡೆದುದರಲ್ಲಿ ಸಂದೇಹವಿಲ್ಲ. ಆದರೆ ಒಂದು ಸಾಮಾಜಿಕ ಕ್ರಾಂತಿಗಿಂತ ಹೆಚ್ಚಾಗಿ ಸಂಘಟಿತ ಧರ್ಮವಾಗಿಯೇ ಅದು ಹೆಚ್ಚು ಪ್ರಚಾರವಾಯಿತು. ದೇವಾಲಯಗಳಿಗೆ ಹೋಗದಂತೆ ತಮ್ಮ ಅನುಯಾಯಿಗಳನ್ನು ಬಸವಣ್ಣನವರು ನಿರ್ಬಂಧಿಸಿದ್ದರು; ಸ್ತ್ರೀಯರು ಮುಂದೆ ಬಂದು ಸಾಮಾಜಿಕ ಚಟುವಟಿಕೆಗಳಲ್ಲಿ ಸೇರುವಂತೆ ಉತ್ತೇಜನ ನೀಡಿದ್ದರು. ಇವುಗಳನ್ನು ಮತ್ತು ಇತರ ಕೆಲವು ಬೋಧನೆಗಳನ್ನು ಅವರ ಮುಂದಿನವರು ನಿರ್ಲಕ್ಷಿಸಿದರು. ಆದರೆ ಅದೊಂದು ಪ್ರತ್ಯೇಕ ಕಥೆ. ಇಲ್ಲಿ ಅದು ನಮಗೆ ಸಂಬಂಧಪಟ್ಟಿಲ್ಲ.

ಬಿಜ್ಜಳನ ಸಾವು ವಿವಾದಾಸ್ಪದ ವಿಚಾರವಾಗಿದೆ. 'ದಯವೇ ಧರ್ಮದ ಮೂಲವಯ್ಯಾ' ಎಂದು ಸಾರಿದ್ದ ಬಸವಣ್ಣನವರು ಬಿಜ್ಜಳನ ಹತ್ಯೆಗೆ ತಮ್ಮ ಸಮ್ಮತಿ ಸೂಚಿಸಿರಲು ಸಾಧ್ಯವಿಲ್ಲವೆಂದೂ ವಾದಿಸಲಾಗಿದೆ; ಬಸವಣ್ಣನವರು ಬೇಡಿಕೊಂಡರೂ ಅವರ ಮಾತು ಕೇಳದೆ ಬಿಜ್ಜಳನ ಕೊಲೆ ಮಾಡಲಾಯಿತೆಂದು ಕೆಲವರು ಹೇಳುತ್ತಾರೆ. ಬಿಜ್ಜಳನ ಹತ್ಯೆಯ ಪ್ರಸಂಗದಲ್ಲಿ ಬಸವಣ್ಣನವರು ಯಾವುದೇ ಪಾತ್ರವಹಿಸಿರಲಿಲ್ಲವೆಂದೂ ಈ ಹತ್ಯೆಯ ಹಿಂದೆ

ರಾಜಕೀಯ ಉದ್ದೇಶಗಳಷ್ಟೇ ಇದ್ದುವೆಂದೂ ಬಿಜ್ಜಳನ ಹತ್ಯೆಗೆ ಯಾವ ವೀರಶೈವನೂ ಕಾರಣನಲ್ಲವೆಂದೂ ಮತ್ತೆ ಕೆಲವರ ಅಭಿಪ್ರಾಯ

ಬಿಜ್ಜಳ ಮತ್ತು ಬಸವಣ್ಣನವರ ನಡುವೆ ಇದ್ದ ಪ್ರೀತಿಯೇನೂ ಅಳಿಸಿಹೋಗಿರಲಿಲ್ಲ. ಶಿವಭಕ್ತರಿಗೆ ಅಥವಾ ವೀರಶೈವಧರ್ಮಕ್ಕೆ ಉಂಟಾಗುವ ಯಾವುದೇ ಅನ್ಯಾಯವನ್ನು ಸಹಿಸುವುದು ಅಸಾಧ್ಯವೆಂಬುದನ್ನು ವೀರಶೈವ ಧರ್ಮ ಒಪ್ಪುತ್ತದೆ. ಹೇಗಾದರೂ ಮಾಡಿ ಅಂಥ ಅನ್ಯಾಯವನ್ನು ಪ್ರತಿಭಟಿಸಲೇ ಬೇಕು. ಕೆಡುಕನ್ನು ಉಂಟುಮಾಡಿದವರನ್ನು ಶಿಕ್ಷಿಸಬೇಕು ಅಥವಾ ಕೊಲ್ಲಬೇಕು. ಅವನನ್ನು ಶಿಕ್ಷಿಸುವುದು ಸಾಧ್ಯವಾಗದೆ ಹೋದ ಪಕ್ಷದಲ್ಲಿ ಅವನಿರುವ ಸ್ಥಳವನ್ನೇ ತೊರೆದು ದೂರ ಹೊರಟುಹೋಗಬೇಕು. ಬಸವಣ್ಣನವರೂ ಮತ್ತಿತರೂ ಚಾಂಡೇಶನ ಕಥೆಯಂತಹ ಕಥೆಗಳಲ್ಲಿ ನಂಬಿಕೆಯಿರಿಸಿದ್ದರು. ಹಾಗೂ ಅವನ್ನು ಮೆಚ್ಚಿದ್ದರು. ಒಮ್ಮೆ ಕುರಿಗಳ ಸಗಣಿಯನ್ನು ರಾಶಿ ಮಾಡಿ ಅದನ್ನು ಚಾಂಡೇಶ ಪೂಜಿಸುತ್ತಿದ್ದನಂತೆ; ಅವನ ಮುಗ್ಧ ಮನಸ್ಸಿಗೆ ಈ ಸಗಣಿ ರಾಶಿ ಶಿವನನ್ನು ಪ್ರತಿನಿಧಿಸಿದಂತೆ ಕಂಡದ್ದೇ ಇದಕ್ಕೆ ಕಾರಣವೆನ್ನಲಾಗಿದೆ. ಆದರೆ ಶಿವನ ಈ ವಿಗ್ರಹಕ್ಕೆ ಗೌರವ ತೋರಿಸಲು ಚಾಂಡೇಶನ ತಂದೆ ಒಪ್ಪಲಿಲ್ಲ. ಆಗ ತುಂಬ ಕೋಪಗೊಂಡ ಚಾಂಡೇಶ ತಂದೆಯನ್ನೇ ಕೊಂದ. ಈ ಬಗೆಯ ಧಾರ್ಮಿಕ ಉನ್ಮತ್ತಾಭಿಮಾನ ಹಾಗೂ ಉದ್ರೇಕಗಳನ್ನು ಆಚರಣೆಗೆ ತಂದ ಸಂದರ್ಭಗಳು ವಿರಳವಾಗಿದ್ದರೂ ತತ್ವಶಃ ಒಪ್ಪಲಾಗಿತ್ತು. ಮೇಲಿನ ಘಟನೆಯನ್ನು ನಿರೂಪಿಸಿದ ಹಿಂದಿನ ಬಹುಮಟ್ಟಿನ ಎಲ್ಲರೂ, ಜಗದೇವನನ್ನೂ ಅವನ ಸ್ನೇಹಿತರನ್ನೂ, ಬಿಜ್ಜಳನನ್ನು ಕೊಂದ ಆಪಾದನೆಯಿಂದ ಮುಕ್ತಗೊಳಿಸಿದರಷ್ಟೇ ಅಲ್ಲದೆ, ತಮ್ಮ ಧರ್ಮದ ಉಳಿವಿಗಾಗಿ ಮಹಾಸೇವೆ ಸಲ್ಲಿಸಿದವರೆಂದು ಅವರ ಕೆಲಸವನ್ನು ಪ್ರಶಂಸಿಸಿದ್ದಾರೆ.

ಅನಂತರ ಬಹಳ ಕಾಲ ಕಲ್ಯಾಣ ಧಾರ್ಮಿಕ ಚಟುವಟಿಕೆಗಳ ಕೇಂದ್ರವಾಗಿ ಉಳಿಯಲಿಲ್ಲ. ಇದು ವೀರಶೈವ ಧರ್ಮದ ಪ್ರಸಾರಕ್ಕೆ ಪರೋಕ್ಷವಾಗಿ ನೆರವು ನೀಡಿತೆನ್ನಬಹುದು. ಕಲ್ಯಾಣದಲ್ಲಿಯೇ ಕೇಂದ್ರೀಕೃತರಾಗಿದ್ದ ವೀರಶೈವ ಮುಖಂಡರು ಹೊರಗೆ ಹೋದರು. ಹಾಗೂ ನಾಡಿನ ಬೇರೆ ಬೇರೆ ಭಾಗಗಳಲ್ಲಿ ನೆಲೆಸಿದರು. ಅವರೊಂದಿಗೆ ಹೊಸ ವಿಚಾರಗಳೂ ಹೊಸ ಆಲೋಚನೆಗಳೂ ಪಯಣಿಸಿದುವು.

# 10. ವಚನಕಾರ ಬಸವಣ್ಣನವರು

ಸಾಮಾಜಿಕ ಹಾಗೂ ಧಾರ್ಮಿಕ ಸುಧಾರಕರಾಗಿಯಷ್ಟೇ ಅಲ್ಲದೆ, ವಚನಕಾರರಾಗಿಯೂ ಬಸವಣ್ಣನವರು ಸ್ಮರಣೀಯರಾಗಿದ್ದಾರೆ. ಪ್ರಾಯಃ ಇವರು ಕನ್ನಡದಲ್ಲಿಯೇ ಅತ್ಯಂತ ದೊಡ್ಡ ವಚನಕಾರರಾಗಿದ್ದಾರೆ. ಕನ್ನಡದಲ್ಲಿ ವಚನಗಳ ಪರಂಪರೆ ಪ್ರಾರಂಭವಾದದ್ದೇ ಬಸವಣ್ಣನವರಿಂದ ಎಂದು ಭಾವಿಸುವ ಕೆಲವರಿದ್ದಾರೆ. ಇದು ಸರಿಯಲ್ಲ; ನಿಜವಾಗಿಯೂ ಬಸವಣ್ಣನವರು ಪ್ರಥಮ ವಚನಕಾರರಲ್ಲ. ಹನ್ನೊಂದನೆಯ ಶತಮಾನದ ಮಧ್ಯ ಭಾಗದಲ್ಲಿ ಜೀವಿಸಿದ್ದ ದೇವರದಾಸಿಮಯ್ಯ ಕೆಲಮಟ್ಟಿನ ಸಾಹಿತ್ಯಿಕ ಮೌಲ್ಯವಿರುವ ವಚನಗಳನ್ನು ರಚಿಸಿದ್ದ. ಅನಂತರ ಹನ್ನೆರಡನೆಯ ಶತಮಾನದ ಅನುಭಾವಿಗಳೂ ಸುಧಾರಕರೂ ವಚನಗಳನ್ನು ಒಂದು ಸಾಹಿತ್ಯ ಪ್ರಕಾರವಾಗಿ ಬೆಳೆಸಿದರು. ಮತ್ತು ಇವರಲ್ಲಿ ಬಸವಣ್ಣನವರು ಅಗ್ರಗಣ್ಯರಾಗಿದ್ದಾರೆ.

ಕನ್ನಡ ಸಾಹಿತ್ಯದ ಲಿಖಿತ ಇತಿಹಾಸ ಒಂಬತ್ತನೆಯ ಶತಮಾನದಿಂದ ಪ್ರಾರಂಭವಾಗುತ್ತದೆ. ಹತ್ತನೆಯ ಶತಮಾನದ ಅವಧಿಯಲ್ಲಿ ಪಂಪ ರನ್ನರಂತಹ ಮಹಾಕವಿಗಳು ತಮ್ಮ ಕಾವ್ಯಗಳನ್ನು 'ಚಂಪೂ'[1] ಶೈಲಿಯಲ್ಲಿ ರಚಿಸಿದರು. ಈ ಕವಿಗಳು ಆ ಕಾಲದ ಆಡುಭಾಷೆಯನ್ನು ಬಳಸಿದುದರಿಂದ ಅವರ ಸಮಕಾಲೀನರಲ್ಲಿ ಹೆಚ್ಚು ಜನರಿಗೆ ಇವರ ಕಾವ್ಯಗಳು ಸಹಜವಾಗಿಯೇ ಅರ್ಥವಾದುವು. ಆದರೆ ಕಾಲ ಸರಿದಂತೆ, ಹನ್ನೊಂದನೆಯ ಶತಮಾನದ ಪ್ರಾರಂಭದಲ್ಲಿ, ಭಾಷೆ ಒಂದು ಪರಿವರ್ತನೆಗೆ ಒಳಗಾಯಿತು. ಪಂಪರನ್ನರು ಬಳಸಿದ ಭಾಷೆ ಹೆಚ್ಚು ಕಾಲ ಆಡುಭಾಷೆಯಾಗಿ ಉಳಿಯಲಿಲ್ಲ. ಅದನ್ನು ಹಳಗನ್ನಡವೆಂದು ಹೆಸರಿಸಲಾಯಿತು. ಹನ್ನೊಂದನೆಯ ಶತಮಾನದಲ್ಲಿ ಹಳಗನ್ನಡ ನಡುಗನ್ನಡವಾದ ಸಂಧಿಕಾಲದ ಅನಂತರವೂ, ಪಂಪರನ್ನರನ್ನೇ ತಮ್ಮ ಆದರ್ಶವನ್ನಾಗಿ ಭಾವಿಸಿಕೊಂಡ ಕವಿಗಳು, ಆ ಹಿಂದಿನ ಕವಿಗಳ ಭಾಷೆಯನ್ನೇ ಬಳಸಿ ಕೃತಿರಚನೆ ಮಾಡಿದರು. ಇದರ ಪರಿಣಾಮವಾಗಿ ಹನ್ನೊಂದು - ಹನ್ನೆರಡನೆಯ ಶತಮಾನಗಳಲ್ಲಿ ರಚಿತವಾದ ಚಂಪೂ ಕಾವ್ಯಗಳು ಪಂಡಿತರಿಗೆ ಮಾತ್ರ ಅರ್ಥವಾಗುವಂತಿದ್ದುವು. ಸಾಹಿತ್ಯವೆಂಬುದು ವಿದ್ವತ್ತನ್ನು ಪ್ರದರ್ಶಿಸುವ ಒಂದು ವಿಧಾನವಾಯಿತು, ಎಂದರೆ ಭಾಷೆ

---

1.'ಚಂಪೂ' ಎಂಬುದು ಗದ್ಯಪದ್ಯ ಮಿಶ್ರಿತವಾದ ಒಂದು ಸಾಹಿತ್ಯ ಪ್ರಕಾರ

ಪಾಂಡಿತ್ಯ ಪ್ರದರ್ಶನದ ಒಂದು ಸಾಧನವಾಯಿತು ಹಾಗೂ ಹೆಚ್ಚು ಹೆಚ್ಚು ಸಂಸ್ಕೃತೀಕರಣಗೊಂಡಿತು.

ಬಸವಣ್ಣನವರ ಕ್ರಾಂತಿ ಸಾಮಾನ್ಯರನ್ನು ಉದ್ದೇಶಿಸಿತ್ತಲ್ಲದೆ, ವಿದ್ವಾಂಸರನ್ನಾಗಲಿ ಕುತಾರ್ಕಿಕರನ್ನಾಗಲಿ ಉದ್ದೇಶಿಸಿರಲಿಲ್ಲ. ಈ ಕ್ರಾಂತಿಯ ಮುಖಂಡರು ಜನ ಸಮುದಾಯಕ್ಕೆ ತಿಳಿಹೇಳಿ ಅವರಿಗೆ ಮಾರ್ಗದರ್ಶನ ನೀಡಬಯಸಿದ್ದರು. ಆದ್ದರಿಂದ ಅವರು ತಮ್ಮ ಬರವಣಿಗೆಯಲ್ಲಿ ಜನ ಸಮುದಾಯದ ಭಾಷೆಯನ್ನೇ ಬಳಸಿದುದು ಸಹಜವೇ ಆಗಿತ್ತು. ಬಸವಣ್ಣನವರೂ ಇತರ ಶರಣರೂ ಸುಶಿಕ್ಷಿತ ವರ್ಗದವರ ಆಡುಭಾಷೆಗೆ ಸಮೀಪವಾದ ಕನ್ನಡ ಭಾಷೆಯನ್ನು ತಮ್ಮ ಮಾಧ್ಯಮವನ್ನಾಗಿ ಮಾಡಿಕೊಂಡರು. ಆರಿಸಿದ ಕೆಲವು ಜನರಿಗಾಗಿ ಸಾಹಿತ್ಯವನ್ನು ರಚಿಸುವುದಕ್ಕಿಂತ ಹೆಚ್ಚಾಗಿ ಜನಸಮುದಾಯಕ್ಕೆ ಬೋಧಿಸಿ ಅವರಿಗೆ ಮಾರ್ಗದರ್ಶನ ನೀಡುವುದರಲ್ಲಿಯೇ ಅವರು ಹೆಚ್ಚು ಆಸಕ್ತರಾಗಿದ್ದರು. ಫಲಿತಾಂಶವಾಗಿ ಅವರಲ್ಲಿ ಯಾರೂ ಕಾವ್ಯರಚನೆ ಮಾಡಲಿಲ್ಲ; ಚಂಪೂ ಶೈಲಿಯನ್ನು ಸಂಪೂರ್ಣವಾಗಿ ಬಿಟ್ಟು, ಬದಲಿಗೆ ವಚನಗಳನ್ನು ರಚಿಸಿದರು. ವಚನಗಳು ಮೂಲತಃ ಸಾಹಿತ್ಯ ರಚನೆಯ ಉದ್ದೇಶದಿಂದ ಬರೆಯಲಾದುವೇ ಅಲ್ಲ. ಆದರೆ ಅವುಗಳಲ್ಲಿ ಕೆಲವು ಶ್ರೇಷ್ಠ ಗುಣಮಟ್ಟದ ಸಾಹಿತ್ಯವಾಗಿರುವುದಂತೂ ನಿಜ.

'ವಚನ' ಎಂಬ ಶಬ್ದದ ಅರ್ಥ ಗದ್ಯ ಅಥವಾ ಮಾತು ಎಂದು. ಚಂಪೂ ಕಾವ್ಯಗಳಲ್ಲಿ ಬಳಸಲಾದ ಗದ್ಯಕ್ಕೆ ವಚನವೆಂಬ ಹೆಸರೇ ಇದೆ. ಆದರೆ ವೀರಶೈವ ವಚನಕಾರರು ಬಳಸಿದ ಭಾಷೆ ಪದ್ಯವೂ ಅಲ್ಲ; ಗದ್ಯವೂ ಅಲ್ಲ, ಇದೊಂದು ಬಗೆಯ ಕಾವ್ಯಮಯ ಗದ್ಯ. ವಚನ ಸಾಹಿತ್ಯವನ್ನು ವಾಲ್ಟ್ ವ್ಹಿಟ್‌ಮನ್‌ನ 'ಲೀವ್ಸ್ ಆಫ್ ಗ್ರಾಸ್'ನ' ಅಥವಾ ರವೀಂದ್ರನಾಥಠಾಕೂರರ 'ಗೀತಾಂಜಲಿ'ಯ ಕಾವ್ಯಮಯ ಗದ್ಯಕ್ಕೆ ಹೋಲಿಸಬಹುದು. ವಚನ ರಚನೆಯಲ್ಲಿನ ಒಂದು ಅನುಕೂಲವೆಂದರೆ, ಇವುಗಳನ್ನು ಸುಲಭವಾಗಿ ಬರೆಯಬಹುದು. ಭಾಷೆ ಸರಳವಾಗಿದ್ದು ಇಲ್ಲಿ ಚರಣಗಳು, ಯತಿ, ಪ್ರಾಸಾನುಪ್ರಾಸಗಳ ನಿಯಮಗಳನ್ನೇನೂ ಪಾಲಿಸಬೇಕಾಗಿಲ್ಲ. ಈ ಕಾರಣದಿಂದಲೇ ವಿದ್ವಾಂಸರು ಮತ್ತು ಅಂತೆಯೇ ಸಾಮಾನ್ಯ ಜನರು ಕೂಡ ತಮ್ಮ ಭಾವನೆಗಳನ್ನು ವಚನಗಳ ಮಾಧ್ಯಮದ ಮೂಲಕ ಪರಿಣಾಮಕಾರಿಯಾಗಿ ವ್ಯಕ್ತಪಡಿಸಲು ಸಮರ್ಥರಾದರು. ಬಸವಣ್ಣನವರ ವಚನಗಳು ವಚನ ಸಾಹಿತ್ಯದಲ್ಲಿನ ಉತ್ಕೃಷ್ಟ ಮಾದರಿಯಾಗಿದೆಯೆಂದು ಒಪ್ಪಿಕೊಳ್ಳಲಾಗಿದೆ.

ವಚನಗಳು ಕಾವ್ಯವಲ್ಲವಾದರೂ ಪ್ರತಿಯೊಂದು ವಚನವನ್ನೂ ವಿವಿಧ ಉದ್ದಗಳ ಸಾಲುಗಳಲ್ಲಿ ವ್ಯವಸ್ಥೆಗೊಳಿಸಲು ಸಾಧ್ಯವಿದೆ. ವಚನಗಳು ಮೂರು ಸಾಲುಗಳಿಂದ 30 ಅಥವಾ 35 ಸಾಲುಗಳವರೆಗೂ ಇರಬಹುದು. ಸಾಲುಗಳ ಸಂಖ್ಯೆ ಇಷ್ಟೇ ಇರಬೇಕೆಂಬ ನಿರ್ಬಂಧವೇನೂ ಇಲ್ಲ. ಪ್ರತಿಯೊಂದು

ವಚನವೂ ಒಂದು ಅಂಕಿತದೊಂದಿಗೆ ಮುಕ್ತಾಯಗೊಳ್ಳುತ್ತದೆ. (ವಚನ ಬರೆದವನು ಯಾರು ಎಂಬುದನ್ನು ಈ ಅಂಕಿತ ಸೂಚಿಸುತ್ತದೆ) ಬಸವಣ್ಣನವರ ಅಂಕಿತ 'ಕೂಡಲ ಸಂಗಮ'. ಚನ್ನಬಸವ 'ಕೂಡಲ ಚನ್ನ ಸಂಗಮ' ಎಂಬುದನ್ನು ತನ್ನ ಅಂಕಿತವಾಗಿ ಇರಿಸಿಕೊಂಡಿದ್ದಾನೆ. ಬಸವಣ್ಣನವರ ಅಂಕಿತದ ಮಾದರಿಯನ್ನೇ ಅನುಸರಿಸಿ ಇವನು ತನ್ನ ಅಂಕಿತವನ್ನು ಇರಿಸಿಕೊಂಡನೆಂಬುದು ಸ್ಪಷ್ಟ. ವಚನಕಾರರು ತಮ್ಮ ಜೀವನ ನಿರ್ವಹಣೆಗಾಗಿ ಕೈಗೊಂಡಿದ್ದ ವೃತ್ತಿಗಳನ್ನೂ ಕೆಲವು ಅಂಕಿತಗಳು ಸೂಚಿಸುತ್ತವೆ.

ಬಸವಣ್ಣನವರು ರಚಿಸಿದ ವಚನಗಳ ಸಂಖ್ಯೆ ಸುಮಾರು 1,400. ಹೊಸ ಹೊಸ ಹಸ್ತಪ್ರತಿಗಳು ದೊರೆತಂತೆ ಪ್ರತಿವರ್ಷ ಅವರ ಹೆಚ್ಚು ಹೆಚ್ಚು ವಚನಗಳು ಸಿಗುತ್ತಿವೆ. ಅವರ ವಚನಗಳನ್ನು ಸ್ಥೂಲವಾಗಿ ಕೆಲವು ಶೀರ್ಷಿಕೆಗಳಲ್ಲಿ ವರ್ಗೀಕರಿಸಬಹುದು; ಕೆಲವು ವಚನಗಳು ಸ್ವರೂಪದಲ್ಲಿ ಶುದ್ಧಾಂಗವಾಗಿ ಉಪದೇಶಾತ್ಮಕವಾಗಿವೆ; ಇನ್ನು ಕೆಲವು ಸಂಪೂರ್ಣವಾಗಿ ಸಾಮಾಜಿಕ ವಿಡಂಬನೆಗಾಗಿಯೇ ಮೀಸಲಾಗಿವೆ. ಇನ್ನೂ ಕೆಲವು ಸ್ವ - ವಿಡಂಬನೆಯನ್ನೊಳಗೊಂಡಿದ್ದು, ಅವರ ಆಂತರಿಕ ಘರ್ಷಣೆಯನ್ನು ವ್ಯಕ್ತಪಡಿಸುವುದಾದರೆ, ಮತ್ತೆ ಕೆಲವು ವೀರಶೈವ ಧರ್ಮದ ಸಿದ್ಧಾಂತಗಳನ್ನು ನಿರೂಪಿಸುತ್ತವೆ. ಹಾಗೆಯೇ ಇನ್ನೂ ಕೆಲವು ವಚನಗಳು ಅವರ ಆಧ್ಯಾತ್ಮಿಕ ಅನುಭವಗಳನ್ನು ವ್ಯಕ್ತಪಡಿಸುತ್ತವೆ. ಅವರ ವಚನಗಳಲ್ಲಿ ಹಲವನ್ನು ಇನ್ನೂ ವರ್ಗೀಕರಿಸಬೇಕಾಗಿದೆಯಷ್ಟೇ! ಯಾವುದೋ ಒಂದು ಘಟನೆಯಿಂದ ಸ್ಫೂರ್ತಿಗೊಂಡು ತಮ್ಮಷ್ಟಕ್ಕೆ ತಾವೇ ರಚನೆಯಾದುವೆಂದು ಭಾವಿಸಬಹುದಾದ ಕೆಲವು ವಚನಗಳೂ ಇವೆ. ಯಾವುದೇ ವಿಶಿಷ್ಟ ಸಾಹಿತ್ಯಿಕ ಗುಣಗಳಿಲ್ಲದ ಅವರ ವಚನಗಳೂ ಕೆಲವಿವೆ. ಆದರೆ ಇಂಥವುಗಳ ಸಂಖ್ಯೆ ಕಡಿಮೆ.

ಮೊದಲ ಬಾರಿಗೆ ಕನ್ನಡ ಸಾಹಿತ್ಯದಲ್ಲಿ ಭಾವಗೀತಾತ್ಮಕ ಶೈಲಿಯನ್ನು ತಂದವರು ಬಸವಣ್ಣನವರು ಹಾಗೂ ಅವರ ಸಂಗಡಿಗರೇ ಆಗಿದ್ದಾರೆ. ಹಿಂದಿನ ಕವಿಗಳು ಬರೆದ ದೀರ್ಘ ನಿರೂಪಣೆಯ ಕಾವ್ಯಗಳು ಪುರಾಣ ಕಥೆಗಳನ್ನೇ ತಮ್ಮ ಕಥಾ ವಿಷಯವಾಗಿ ಹೊಂದಿದ್ದುವು. ಅಂಥ ನಿರೂಪಣೆಗಳಲ್ಲಿ ವಿವಿಧ ಬಗೆಯ ಜೀವನಾನುಭವಗಳನ್ನೂ ಸ್ವಭಾವಗಳನ್ನೂ ವ್ಯಕ್ತಪಡಿಸಲು ಹೆಚ್ಚು ಅವಕಾಶವಿದ್ದಿರಲಿಲ್ಲ. ಆದರೆ ಇದಕ್ಕೆ ಪ್ರತಿಯಾಗಿ ಬಸವಣ್ಣನವರ ರಚನೆಗಳು ಸ್ವರೂಪ ಹಾಗೂ ಸ್ಫೂರ್ತಿ ಇವೆರಡರಲ್ಲಿಯೂ ಭಾವಗೀತಾತ್ಮಕವಾಗಿವೆ.

ವಚನಗಳು ಒಂದು ಬಗೆಯ ಕಾವ್ಯಾತ್ಮಕ ಗದ್ಯಗಳೆಂದು ಹಿಂದೆಯೇ ಹೇಳಿದ್ದೇವೆ. ಇವುಗಳನ್ನು ಸಂಗೀತೋಪಕರಣಗಳೊಂದಿಗೆ ಹಾಡಲಾಗಿತ್ತು. ಹಿಂದಿನ ಅನೇಕ ಕೃತಿಕಾರರು ವಚನಗಳನ್ನು ಗೀತೆಗಳು ಅಥವಾ ಹಾಡುಗಳೆಂದು ಕರೆದಿದ್ದಾರೆ. ಇವುಗಳನ್ನು ಕೆಲವು ಸಲ ಸಂಗೀತಕ್ಕೂ ಅಳವಡಿಸಿ

ದ್ದುಂಟು. ಉದಾಹರಣೆಗೆ, ಸಿದ್ಧರಾಮನ ವಚನಗಳನ್ನು ಅವನ ಶಿಷ್ಯರು 'ಶುದ್ಧಭೈರವಿ' ರಾಗದಲ್ಲಿ ಹಾಡುತ್ತಿದ್ದರೆಂಬುದು ಹದಿಮೂರನೆಯ ಶತಮಾನದ ಕವಿಯಾಗಿದ್ದ ರಾಘವಾಂಕನಿಂದ ನಮಗೆ ತಿಳಿದುಬರುತ್ತದೆ. ಅಲ್ಲಮನು ತನ್ನ 'ಹಾಡು'ಗಳನ್ನು ಹಾಡುತ್ತಾ ಸ್ಥಳದಿಂದ ಸ್ಥಳಕ್ಕೆ ಸಂಚರಿಸುತ್ತಿದ್ದನೆಂದೂ 'ದಂಡಿಗೆ'ಯೆಂಬ ತಂತಿವಾದ್ಯದೊಂದಿಗೆ ಅವುಗಳನ್ನು ನುಡಿಸುತ್ತಿದ್ದನೆಂದೂ ಹೇಳಲಾಗಿದೆ. ವಚನಗಳ ಮೇಲೆ ವ್ಯಾಖ್ಯಾನವನ್ನು ಬರೆದ, ಹದಿನೈದನೆಯ ಶತಮಾನದ ವಿದ್ವಾಂಸನಾದ ಕಲ್ಲುಮಠದ ಪ್ರಭುದೇವನು 'ಶಿವಸುಖಾನುಭವದ ಸ್ವಯಂಪ್ರೇರಿತ ಪ್ರವಾಹ'ವೆಂದು ವಚನಗಳನ್ನು ವ್ಯಾಖ್ಯಾನಿಸಿರುವುದು ಯುಕ್ತವೇ ಆಗಿದೆ.

ಕೆಲವು ಸನ್ನಿವೇಶಗಳಲ್ಲಿ, ಉದಾಹರಣೆಗೆ ದನಗಳ ಕಳುವಾದಾಗ, ಬಸವಣ್ಣನವರು ತಮ್ಮ ಪ್ರತಿಕ್ರಿಯೆಯನ್ನು ಹೇಗೆ ವ್ಯಕ್ತಪಡಿಸಿದರೆಂಬುದನ್ನು ನಾವು ಹಿಂದೆಯೇ ನೋಡಿದ್ದೇವೆ. ಅವರು ಭಾವಜೀವಿಗಳೂ ಸಂವೇದನಶೀಲರೂ ಆಗಿದ್ದರು. ನಮಗೆ ಮಹತ್ವದ್ದಲ್ಲವಾಗಿ ಕಾಣುವ ಹಲವು ಘಟನೆಗಳು ಅವರಲ್ಲಿ ಪ್ರಬಲ ಭಾವನೆಗಳನ್ನು ಮೂಡಿಸಿದ್ದುಂಟು. ಅಂಥ ಭಾವನೆಗಳನ್ನು ಪ್ರಕಟಪಡಿಸದೆ ಇರಲು ಸಾಧ್ಯವಾಗದೆ ಅವರು ಅವುಗಳನ್ನು ಭಾಷೆಯಲ್ಲಿ ವ್ಯಕ್ತಪಡಿಸುತ್ತಿದ್ದರು. ಅವರ ಅನೇಕ ವಚನಗಳು ಭಾವನೆಯ ಇಂಥ ಸ್ಫೋಟಗಳೇ ಆಗಿವೆ.

ಬಸವಣ್ಣನವರು ಜೀವನ ಹಾಗೂ ನಿಸರ್ಗಗಳ ತೀಕ್ಷ್ಣ ವೀಕ್ಷಕರಾಗಿದ್ದರು. ಅವರು ಬಳಸಿದ ಅನೇಕ ಪ್ರತಿಮೆಗಳು ಹೊಸದೂ, ಮೂಲ ರೂಪದವೂ ಆಗಿವೆ. ಪ್ರಾಣಿಗಳು, ಸಸ್ಯಗಳು, ಪಕ್ಷಿಗಳು ಹಾಗೂ ಕೀಟಗಳ ಜಗತ್ತಿನಿಂದ ಅವರು ಅನೇಕ ಪ್ರತಿಮೆಗಳನ್ನು ಬಳಸಿದ್ದಾರೆ. ಸರ್ಪದ ಹೆಡೆಯ ನೆರಳಿನಲ್ಲಿ ವಿಶ್ರಮಿಸುತ್ತಿರುವ ಒಂದು ಕಪ್ಪೆ, ಹಾಗೂ ತನ್ನನ್ನೇ ನಿಧಾನವಾಗಿ ಹಾವು ನುಂಗುತ್ತಿದ್ದರೂ, ಹಾರುತ್ತಿರುವ ಕೀಟವನ್ನು ಹಿಡಿಯಲು ಪ್ರಯತ್ನಿಸುತ್ತಿರುವ ಇನ್ನೊಂದು ಕಪ್ಪೆ - ಇವುಗಳ ಪ್ರತಿಮೆಗಳನ್ನು, ಮಾನವ ಜೀವನದ ದುರಂತ ಚಿತ್ರಣಕ್ಕಾಗಿ ಬಸವಣ್ಣನವರು ಧ್ವನಿಪೂರ್ಣವಾಗಿ ಬಳಸಿದ್ದಾರೆ. ಮರಣದ ನೆರಳಿನಲ್ಲಿಯೇ ಮಾನವರು ಬದುಕುತ್ತಿರುತ್ತಾರೆ ಹಾಗೂ ನಿಧಾನವಾಗಿ ಅದರತ್ತ ಸೆಳೆಯಲ್ಪಡುತ್ತಾರೆ. ಆದರೂ ತಮಗೇನು ಸಂಭವಿಸುತ್ತದೆ ಎಂಬುದರತ್ತ ಅವರು ಲಕ್ಷ್ಯ ಹರಿಸುವುದಿಲ್ಲ. ಇದು ನಿರಾಶಾವಾದವಾಗಿ ಕಾಣಬಹುದು. ಆದರೆ ವಾಸ್ತವವಾಗಿ ಬಸವಣ್ಣನವರು ಎಂದೂ ನಿರಾಶಾವಾದಿಯಾಗಿರಲಿಲ್ಲ. ಅವರಿಗೆ ಈ ಲೋಕದ ಸತ್ಯತೆಯಲ್ಲಿ ನಂಬಿಕೆಯಿತ್ತು. ಅವರಿಗೆ ದೇವಲೋಕವೂ ವಾಸ್ತವವಾಗಿತ್ತು; ಪ್ರಾಯಃ ಇನ್ನೂ ಹೆಚ್ಚು ವಾಸ್ತವವಾದ ಲೋಕವಾಗಿತ್ತು. ಪರಲೋಕದಲ್ಲಿ ಉತ್ತಮ ಜೀವನವನ್ನು ನಡೆಸಲು ಮಾಡಿಕೊಳ್ಳುವ ಸಿದ್ಧತೆಯಾಗಿ ಅವರು ಮಾನವನ ಇಹ ಜೀವನವನ್ನು

ಪರಿಗಣಿಸಿದ್ದರು. ಅವರ ದೃಷ್ಟಿಯಲ್ಲಿ ಮಾನವನ ಜೀವನ ದೇವರನ್ನು ತಲುಪುವ ಮಾರ್ಗದಲ್ಲಿನ ಒಂದು ಹೆಜ್ಜೆಯಾಗಿತ್ತು. ನಮ್ಮ ಈ ಲೋಕವನ್ನು ಅವರು ಒಂದು ಟಂಕಸಾಲೆಗೆ ಹೋಲಿಸಿದ್ದಾರೆ.

ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ;
ಇಲ್ಲಿಸಲ್ಲುವರು ಅಲ್ಲಿಯೂ ಸಲ್ಲುವರಯ್ಯಾ;
ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯಾ;
ಕೂಡಲ ಸಂಗಮದೇವಾ.

ಲೋಹದ ಒಂದು ಚೂರು ಹೊರಗೆ ನಾಣ್ಯವಾಗಿ ಸ್ವೀಕೃತವಾಗುವ ಮೊದಲು ಟಂಕಸಾಲೆಯ ಮುದ್ರೆಯನ್ನು ಪಡೆಯಲೇಬೇಕು. ಅಂತೆಯೇ ಪರಲೋಕದಲ್ಲಿ ಸ್ವೀಕೃತನಾಗಬೇಕಾದರೆ, ಈ ಲೋಕದಲ್ಲಿ ಸ್ವೀಕೃತನಾಗುವ ರೀತಿ ಬದುಕು ನಡೆಸಬೇಕು.

ಕೆಲವು ಸಲ ಬಸವಣ್ಣನವರು,ಸಮಗ್ರ ವಿಚಾರವೊಂದನ್ನು, ತನ್ನೆಲ್ಲ ವಿವರಗಳೊಂದಿಗೆ ಸ್ಪಷ್ಟವಾಗಿ ತಿಳಿಸುವ ಉದ್ದೇಶದಿಂದ, ಒಂದೇ ಒಂದು ಪ್ರತಿಮೆಯನ್ನು ಬಳಸಿದ್ದುಂಟು. ಈ ದೃಷ್ಟಿಕೋನದಿಂದ ಕೆಳಗಿನ ವಚನವನ್ನು ಗಮನಿಸಬಹುದು:

ಮನೆಯೊಳಗೆ ಮನೆಯೊಡೆಯನಿದ್ದಾನೊ ಇಲ್ಲವೊ?
ಹೊಸ್ತಿಲಲ್ಲಿ ಹುಲ್ಲು ಹುಟ್ಟಿ, ಮನೆಯೊಳಗೆ ರಜ ತುಂಬಿ,
ಮನೆಯೊಳಗೆ ಮನೆಯೊಡೆಯನಿದ್ದಾನೊ ಇಲ್ಲವೊ?
ತನುವಿನೊಳಗೆ ಹುಸಿ ತುಂಬಿ, ಮನದೊಳಗೆ ವಿಷಯ ತುಂಬಿ,
ಮನೆಯೊಳಗೆ ಮನೆಯೊಡೆಯನಿಲ್ಲಾ -
ಕೂಡಲ ಸಂಗಮದೇವ!

ಪಾಪಿಯ ದೇಹನ್ನು ಬಸವಣ್ಣನವರು ಒಡೆಯನಿಲ್ಲದ ಮನೆಗೆ ಹೋಲಿಸಿದ್ದಾರೆ. ಮನೆಯಲ್ಲಿ ಒಡೆಯನಿಲ್ಲವೆಂದು ಅದರ ಹೊರಗಣ ತೋರಿಕೆಯೇ ತಿಳಿಸುತ್ತದೆ. ಪರಮಾತ್ಮನು ತನ್ನೊಳಗೆ ನೆಲಸುವಂತೆ ಮಾಡಲು ಭಕ್ತನು ತನ್ನ ಶರೀರವನ್ನು ಅಂತರಿಕವಾಗಿ ಹಾಗೂ ಬಾಹ್ಯವಾಗಿ - ಹೀಗೆ ಎರಡೂ ರೀತಿಗಳಲ್ಲಿ ಪರಿಶುದ್ಧವಾಗಿ ಇರಿಸಿಕೊಳ್ಳಬೇಕು ಎಂಬ ಧ್ವನ್ಯರ್ಥ ಮೇಲಿನ ವಚನದಲ್ಲಿ ತುಂಬ ಸೊಗಸಾಗಿ ನಿರೂಪಿತವಾಗಿದೆ.

ಬಸವಣ್ಣನವರು ಶಬ್ದಬ್ರಹ್ಮರು. ಅವರು ಬಳಸುವ ಶಬ್ದಗಳು ಸರಳವಾದುವು; ಆದರೆ ಅನುಸ್ವರ ಅನುರಣನಗಳಿಂದ ಎಂದರೆ ಏರುಧ್ವನಿ ಹಾಗೂ ತಗ್ಗುಧ್ವನಿಗಳಿಂದ ತುಂಬಿದಂಥವು. ಈ ಕೆಳಗಿನ ವಚನ ಸರಳವಾಗಿ ಕಾಣುತ್ತಿದ್ದು ಸಾಮಾನ್ಯ ವಿಚಾರವೊಂದನ್ನು ತಿಳಿಸುವಂತೆ ಕಾಣುತ್ತದೆ. ಆದರೆ ಇದರಲ್ಲಿ ಗಹನವಾದ ಇನ್ನೊಂದು ಅರ್ಥವೂ ಅಡಗಿದೆ.

ಗಂಡ ಶಿವಲಿಂಗದೇವರ ಭಕ್ತ;

ಹೆಂಡತಿ ಮಾರಿ - ಮಸಣಿಯ ಭಕ್ತೆ!
ಗಂಡ ಕೊಂಬುದು ಪಾದೋದಕ - ಪ್ರಸಾದ;
ಹೆಂಡತಿ ಕೊಂಬುದು ಸುರೆ - ಮಾಂಸ!
ಭಾಂಡ - ಭಾಜನ ಶುದ್ಧವಿಲ್ಲದವರ ಭಕ್ತಿ
ಹೆಂಡದ ಮಡಕೆಯ ಹೊರಗೆ ತೊಳೆದಂತೆ,
ಕೂಡಲ ಸಂಗಮದೇವಾ!

ಈ ವಚನದಲ್ಲಿ ಚರ್ಚಿಸಲಾದ ಸಮಸ್ಯೆ ಮತಾಂತರಕ್ಕೆ ಸಂಬಂಧಿಸಿದೆ ಎಂಬುದು ತುಂಬ ಸ್ಪಷ್ಟವಾಗಿದೆ - ಪತಿ ವೀರಶೈವನಾಗಿ ನಿರ್ಮಲವಾದ ಅಭ್ಯಾಸಗಳನ್ನು ಪ್ರಾರಂಭಿಸಿದ್ದ; ಆದರೆ ಪತ್ನಿ ಮೊದಲಿನ ಅನಾಗರಿಕ ಅಭ್ಯಾಸ ಗಳಿಗೇ ಅಂಟಿಕೊಂಡಿದ್ದಳು. ಹೊರಗೆ ಶುಭ್ರವಾಗಿದ್ದು ಒಳಗಿನಿಂದ ಗಬ್ಬು ವಾಸನೆ ಹೊಡೆಯುತ್ತಿರುವ ಹೆಂಡದ ಮಡಕೆಗೆ ಇಂಥ ಸಂಸಾರದ ಧರ್ಮ ನಿಷ್ಠೆಯನ್ನು ಹೋಲಿಸಲಾಗಿದೆ. ಈ ವಚನ ಇನ್ನೊಂದು ಸಾಂದರ್ಭಿಕ ಅರ್ಥವನ್ನೂ ಸೂಚಿಸುತ್ತದೆ. ಈ ಅರ್ಥಸೂಚನೆ ಅನುದ್ದೇಶಿತವಾಗಿರಲೂ ಬಹುದು. ಪತಿಪತ್ನಿಯರು ಪಾತ್ರೆಯ ಹೊರಗಿನ ಹಾಗೂ ಒಳಗಿನ ಮುಖ ಗಳಂತೆ. ಪತಿ ಹಾಗೂ ಅವನ ಪತ್ನಿ, ಭಾರತೀಯ ಸಮಾಜದಲ್ಲಿ ವಹಿಸಿ ಕೊಳ್ಳಬೇಕಾದ ಹೊಣೆಯನ್ನೂ ಈ ಉಪಮೆ ಸೂಚಿಸುತ್ತದೆ. ಗಂಡ ಹೆಚ್ಚಾಗಿ ಹೊರಗೆ ಕೆಲಸಮಾಡಿ ದಿನದ ಆಹಾರ ಗಳಿಸಿದರೆ, ಹೆಂಡತಿ ಸಂಸಾರದ ಸದಸ್ಯರ ಉಸ್ತುವಾರಿ ತೆಗೆದುಕೊಳ್ಳುತ್ತಾಳೆ. ಸಾಮಾನ್ಯವಾಗಿ ಸ್ತ್ರೀಯರು ಹೆಚ್ಚು ಸಂಪ್ರದಾಯಶೀಲರೆಂಬುದನ್ನೂ ಈ ವಚನ ಸೂಚಿಸುತ್ತದೆ.

ಉಪಮೆ ರೂಪಕಗಳ ಬಳಕೆಗೆ ಸಂಬಂಧಿಸಿದಂತೆ ಪ್ರಾಚೀನ ಕನ್ನಡ ಸಾಹಿತ್ಯ ದಲ್ಲಿನ ಕೆಲವು ಕವಿಗಳನ್ನು ಮಾತ್ರ ಬಸವಣ್ಣನವರಿಗೆ ಹೋಲಿಸಬಹುದು. ಬಸವಣ್ಣನವರು ಉತ್ತಮ ಶಿಕ್ಷಕರಂತೆ ತಮ್ಮ ಹೇಳಿಕೆಗಳನ್ನು ಪುನರಾವರ್ತಿಸು ತ್ತಾರೆ; ಒಂದೇ ಬಗೆಯ ವಾಕ್ಯ ರಚನೆಗಳನ್ನು ಬಳಸುತ್ತಾರೆ; ಒಂದೇ ವಚನ ದಲ್ಲಿ ಸಂಸ್ಕೃತ ಹಾಗೂ ಕನ್ನಡ ಪದಪುಂಜಗಳನ್ನು ಜೊತೆಜೊತೆಯಾಗಿ ಬಳಸು ತ್ತಾರೆ. ಕೆಲವು ಸಲ ಅವರು ಗ್ರಾಮೀಣ ಗಾದೆಗಳನ್ನೂ, ನುಡಿಗಟ್ಟುಗಳನ್ನೂ, ಜನಪದ ನಂಬಿಕೆಗಳನ್ನೂ-ತಮ್ಮ ವಿಚಾರಗಳನ್ನು ಜನರಿಗೆ ಸ್ಪಷ್ಟವಾಗಿ ತಿಳಿಸುವ ಉದ್ದೇಶದಿಂದ-ಬಳಸುತ್ತಾರೆ.

ತಮಗೆ ಛಂದೋನಿಯಮಗಳು ತಿಳಿದಿಲ್ಲವೆಂದೂ ತಮಗೆ ಒಪ್ಪಿಗೆ ಯಾಗುವಂತೆ ಹಾಡಲು ಮಾತ್ರ ತಿಳಿದಿದೆಯೆಂದೂ ತಮ್ಮ ವಚನವೊಂದ ರಲ್ಲಿ ಬಸವಣ್ಣನವರು ಸ್ಪಷ್ಟವಾಗಿ ತಿಳಿಸಿದ್ದಾರೆ. ಮಾತಿನಲ್ಲಿ ಶಬ್ದಗಳನ್ನು ಯಾವ ರೀತಿ ಬಳಸಬೇಕೆಂದೂ ಅವರು ತಮ್ಮ ಇನ್ನೊಂದು ವಚನದಲ್ಲಿ ಜನರಿಗೆ ಕಲಿಸಿದ್ದಾರೆ;

ನುಡಿದರೆ ಮುತ್ತಿನ ಹಾರದಂತಿರಬೇಕು.

ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು.
ನುಡಿದರೆ ಸ್ಫಟಿಕದ ಸಲಾಕೆಯಂತಿರಬೇಕು.
ನುಡಿದರೆ ಲಿಂಗ ಮೆಚ್ಚಿ 'ಅಹುದಹುದೆ'ನ ಬೇಕು.
ನುಡಿಯೊಳಗಾಗಿ ನಡೆಯದಿದ್ದರೆ
ಕೂಡಲ ಸಂಗಮ ದೇವನೆಂತೊಲಿವನಯ್ಯಾ?

ಬಸವಣ್ಣನವರು ತಮ್ಮ ಬರವಣಿಗೆಯಲ್ಲಿ ಬಳಸಿರುವ ಭಾಷೆಯ ಬಗೆಗೆ ಈ ವಚನವೇ ಒಂದು ವ್ಯಾಖ್ಯಾನವಾಗಿದೆಯೆನ್ನಬಹುದು. ಅವರಿಗೆ ಭಾಷೆಯೆಂಬುದು ಒಂದು ಸಾಧನವಾಗಿತ್ತು. ತಮ್ಮ ಅಭಿಪ್ರಾಯಗಳನ್ನು ಸಮಗ್ರವಾಗಿಯೂ ನಿಷ್ಕೃಷ್ಟವಾಗಿಯೂ ವ್ಯಕ್ತಪಡಿಸಲು ಒಂದು ಸಾಧನವಲ್ಲದೆ ಭಾಷೆ ಅವರ ದೃಷ್ಟಿಯಲ್ಲಿ ಇನ್ನೇನೂ ಆಗಿರಲಿಲ್ಲ. ಉದಾಹರಣೆಗೆ ಈ ಕೆಳಗಿನ ವಚನವನ್ನು ಪರಿಶೀಲಿಸಿ:

ಲಿಂಗವ ಪೂಜಿಸಿದ ಬಳಿಕ ಜಂಗಮಕ್ಕಂಜಲೇ ಬೇಕು
ದಕ್ಕ ನುಂಗಿದಂತೆ ಬೆರೆತುಕೊಂಡಿರಬೇಡ;
ಬೀಗಿ ಬೆಳೆದ ಗೊನೆವಾಳೆಯಂತೆ ಬಾಗಿಕೊಂಡಿದ್ದಡೆ
ಬೇಡಿದ ಪದವಿಯನೀವ ಕೂಡಲ ಸಂಗಮದೇವ!

ಈ ವಚನದ ಮೊದಲನೆಯ ಎರಡು ಸಾಲುಗಳು, ಭಕ್ತನು ಮಾಡಬೇಕೆಂದು ನಿರೀಕ್ಷಿಸಲಾದ ಕರ್ತವ್ಯವೇನೆಂದು ನೀರಸವಾಗಿ ಹೇಳುತ್ತವೆ ಮತ್ತು ಕೊನೆಯ ಎರಡು ಸಾಲುಗಳು, ಭಕ್ತನು ನಮ್ರತೆಯನ್ನು ಬೆಳೆಸಿಕೊಂಡ ಪಕ್ಷದಲ್ಲಿ ಮಾತ್ರ ದೇವರು ಅವನಿಗೆ ಎಲ್ಲವನ್ನೂ ಅನುಗ್ರಹಿಸುತ್ತಾನೆ ಎಂದು ಅಷ್ಟೇ ನೀರಸವಾದ ರೀತಿಯಲ್ಲಿ ತಿಳಿಸುತ್ತವೆ. ಅಷ್ಟೇನೂ ಸ್ವಾರಸ್ಯಕರವಲ್ಲದ, ಸ್ವಲ್ಪ ಮಟ್ಟಿಗೆ ಮತಧರ್ಮ ಶಾಸ್ತ್ರಕ್ಕೆ ಸಂಬಂಧಿಸಿದ, ಈ ವಾದವು ಆಶ್ಚರ್ಯಕರವಾದ ರೀತಿಯಲ್ಲಿ ತನ್ನಷ್ಟಕ್ಕೆ ತಾನೇ ಅತ್ಯಂತ ಪರಿಣಾಮಕಾರಿಯಾದ ಕಾವ್ಯವಾಗಿ ಮಾರ್ಪಟ್ಟದ್ದು ಬಸವಣ್ಣನವರು ತಮ್ಮ ವಚನ ರಚನೆಯಲ್ಲಿ ಅತ್ಯಂತ ಯುಕ್ತವಾಗಿ ಹೆಣೆದ ಪ್ರತಿಮೆಗಳಿಂದ. ಕಂಬವನ್ನು ನುಂಗಿದವನು ಬಾಗಲಾರ; ಜಂಬ ಅವನ 'ಅಹಂ' ಅನ್ನು ಅತಿಶಯಗೊಳಿಸುತ್ತದೆ. ಒಟ್ಟಿನಲ್ಲಿ ದೇವರನ್ನು ಮುಟ್ಟುವುದು ಅವನಿಗೆ ಸಾಧ್ಯವಾಗಲಾರದು. ಆದರೆ ಭಕ್ತನು 'ಬೀಗಿ ಬೆಳೆದ ಗೊನೆವಾಳೆಯಂತೆ' ಬಾಗಬಲ್ಲನಾದರೆ, ಆಗ ದೇವರು ಸಂತೋಷಪಡುತ್ತಾನೆ. ಪೂರ್ಣ ಪಕ್ವವಾಗಿ ಬೆಳೆದು ತನ್ನ ಭಾರದಿಂದಾಗಿ ಬಾಗಿದ ಬಾಳೆಹಣ್ಣುಗಳ ದೊಡ್ಡ ಗೊಂಚಲಿನ ಈ ಪ್ರತಿಮೆ ಭಕ್ತನು ಪ್ರೌಢ (ಪ್ರಬುದ್ಧ) ಹಾಗೂ ನಮ್ರ (ವಿನೀತ) - ಎರಡೂ ಆಗಿರುವುದನ್ನು ಸೂಚಿಸುತ್ತದೆ. ನಮ್ರತೆಯೇ ಸರ್ವಸ್ವವೆಂದು ಅವನು ತಿಳಿದಿರುತ್ತಾನೆ. ಆದ ಕಾರಣದಿಂದಲೇ ಅವನು ಸೃಷ್ಟಿಕರ್ತನಿಗೆ ಕೃತಜ್ಞತೆಯಿಂದ ತಲೆಬಾಗುತ್ತಾನೆ ಪಕ್ವವಾದ ಬಾಳೆಹಣ್ಣುಗಳ ಗೊಂಚಲಿನಂತೆ.

ಇಲ್ಲಿ ಇನ್ನೂ ಒಂದರ್ಥವನ್ನು ಸ್ಪಷ್ಟವಾಗಿ ಸೂಚಿಸಲಾಗಿದೆ. ಹಣ್ಣುಗಳನ್ನು ಬಿಟ್ಟ ಬಾಳೆಯಮರ ಸಸಿಗಳನ್ನೂ ಹೊಂದಿರಬಹುದು. ಆದರೆ ತನ್ನ ಧ್ಯೇಯ ಸಾಧನೆಯಾದ್ದರಿಂದ ಅದು ಸತ್ತುಹೋಗುತ್ತದೆ. ಅಂತೆಯೇ "ಗೊನೆವಾಳೆ ಯಂತೆ" ಬಾಗುವ ಭಕ್ತನಿಗೆ ಎರಡನೆಯ ಜನ್ಮವಿರುವುದಿಲ್ಲ. ಅವನು ದೇವತ್ವವನ್ನು ಪಡೆಯುತ್ತಾನೆ.

ಬಸವಣ್ಣನವರು ಭಾಷೆಯನ್ನು ಎಷ್ಟು ಎಚ್ಚರಿಕೆಯಿಂದ ಬಳಸುತ್ತಾರೆ ಎಂಬುದನ್ನು ತೋರಿಸಲು ಇನ್ನೊಂದು ನಿದರ್ಶನ ಇಲ್ಲಿದೆ:

ಉಳ್ಳವರು ಶಿವಾಲಯವ ಮಾಡುವರು;
ನಾನೇನ ಮಾಡುವೆ? ಬಡವನಯ್ಯಾ.
ಎನ್ನಕಾಲೇ ಕಂಬ, ದೇಹವೇ ದೇಗುಲ,
ಸಿರ ಹೊನ್ನ ಕಳಸವಯ್ಯಾ.
ಕೂಡಲಸಂಗಮದೇವ, ಕೇಳಯ್ಯಾ;
ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲಾ!

ಪ್ರಾರಂಭದ ಸಾಲುಗಳಲ್ಲಿ ಗಮನಾರ್ಹವಾದುದೇನೂ ಇಲ್ಲ; ಒಂದು ಮುಖ್ಯಾಭಿಪ್ರಾಯವನ್ನಷ್ಟೇ ಇವು ಸರಳವಾಗಿ ವ್ಯಕ್ತಪಡಿಸುತ್ತವೆ. ಭಕ್ತ ಬಡವ; ದೇವಾಲಯ ನಿರ್ಮಾಣದ ವಿಚಾರದಲ್ಲಿ ಅವನು ಶ್ರೀಮಂತರೊಂದಿಗೆ ಸ್ಪರ್ಧಿಸಲಾರ;· ಈ ರೀತಿಯಾಗಿ ದೇವರ ಮೇಲೆ ತನಗಿರುವ ಪ್ರೀತಿಯನ್ನೂ ವ್ಯಕ್ತಪಡಿಸಲಾರ. ಆದ್ದರಿಂದ ಅವನು ವಿನಮ್ರನಾಗಿದ್ದಾನೆ. ಆದರೆ ಈ ವಿನಮ್ರತೆ ಒಂದು ಮುಖವಾಡವಷ್ಟೇ. ಕ್ರಮೇಣ ಈ ಮುಖವಾಡವನ್ನು ಅವನು ಕಳಚಿ ಬಿಡುತ್ತಾನೆ. ತನ್ನ ದೇಹವೇ ಒಂದು ದೇವಾಲಯವೆಂದೂ ಕಾಲುಗಳೇ ಅದರ ಕಂಬಗಳೆಂದೂ ತಲೆಯೇ ಅದರ ಸ್ವರ್ಣಗುಮ್ಮಟವೆಂದೂ ಊಹಿಸಿಕೊಳ್ಳುವುದರ ಮೂಲಕ ಬಸವಣ್ಣನವರು ತಮ್ಮನ್ನು ತಾವೇ ಸಂತೈಸಿಕೊಳ್ಳುತ್ತಾರೆ. ಆದರೆ ಸ್ವತಃ ಸಮಾಧಾನಪಡಿಸಿಕೊಳ್ಳುವ ಈ ಪ್ರವೃತ್ತಿಯೂ ನಿರಂತರವಾಗಿ ಉಳಿಯುವುದಿಲ್ಲ. ಇದು ನಾಟಕೀಯತಿರುವೊಂದನ್ನು ಪಡೆಯುತ್ತದೆ. ಹಾಗೂ ಸ್ವರೂಪದಲ್ಲಿ ಅತ್ಯಂತ ಕಂಠೋಕ್ತವಾದ ಒಂದು ಸ್ಪಷ್ಟ ಪ್ರತಿಪಾದನೆಯಾಗುತ್ತದೆ. ಅವರು ಹೇಳುತ್ತಾರೆ:

ಸ್ಥಾವರಕ್ಕಳಿವುಂಟು,
ಜಂಗಮಕ್ಕಳಿವಿಲ್ಲಾ!

ಶ್ರೀಮಂತರು ಮಾಡುವುದು ಇಷ್ಟು ಮಾತ್ರ; ಅವರು ದೇವಾಲಯ ಗಳನ್ನು ನಿರ್ಮಿಸಬಲ್ಲರು. ಆದರೆ ಈ ಭದ್ರ ದೇವಾಲಯಗಳೂ ಕಾಲನ ತುಳಿತಕ್ಕೆ ಸಿಲುಕಿ ಹಳೆಯವಾಗುತ್ತವೆ; ಶಿಥಿಲವಾಗುತ್ತವೆ. ಗಾಳಿ ಹಾಗೂ ನೀರು-ಇವು ಉಳಿದ ಕೆಲಸ ಮಾಡುತ್ತವೆ. ಆದರೆ "ಜಂಗಮಕ್ಕೆ" ಅಳಿವಿಲ್ಲ. ಅದು ಮಾನವನ ಆತ್ಮದ ಚಿರಂತನ ಸಾರ. ಶ್ರೀಮಂತರನ್ನು ಕಂಡು ಬಸವಣ್ಣನವರು

ಸಂತೋಷದಿಂದ ಅಪಹಾಸ್ಯ ಮಾಡುವುದನ್ನು ನಾವು ಕಾಣಬಹುದು.

ಬಸವಣ್ಣನವರೂ ಅವರ ಸಂಗಡಿಗರೂ ಜನರಲ್ಲಿ ಸ್ಫೂರ್ತಿ ತುಂಬಿ, ಭಾಷೆಯ ಮೂಲಕ ತಮ್ಮನ್ನು ತಾವು ಅಭಿವ್ಯಕ್ತಿಗೊಳಿಸಿಕೊಳ್ಳಲು ಅವರು ಕಾತರರಾಗುವಂತೆ ಮಾಡಿದರು. ಇದರ ಪರಿಣಾಮವಾಗಿ 450 ಕ್ಕಿಂತಲೂ ಹೆಚ್ಚು ಮಂದಿ ವಚನಕಾರರನ್ನು ನಾವು ಕಾಣುತ್ತೇವೆ. ಇದೊಂದು ರೀತಿಯ 'ಜನ ಸಾಹಿತ್ಯ'ವೆಂದು ನಾವು ಕರೆಯಬಹುದು. ಅನೇಕ ವಚನಕಾರರು ಸುಂದರ ವಚನಗಳನ್ನು ರಚಿಸಿದ್ದಾರೆ ಎಂಬುದು ಸತ್ಯ. ಆದರೆ ಯಾವುದೇ ಕಾಲದಲ್ಲಿ ನಾವು ಕಾಣಬಹುದಾದಂತೆ ವಚನ ಸಾಹಿತ್ಯದಲ್ಲಿಯೂ ಕಳಪೆ ರಚನೆಗಳು ಇಲ್ಲದೇ ಇಲ್ಲ. ಬಸವಣ್ಣನವರೂ ಅವರ ಅನುಯಾಯಿಗಳೂ ಅನೇಕರಿಗೆ ವಚನ ರಚನೆ ಮಾಡುವಂತೆ ಸ್ಫೂರ್ತಿ ನೀಡಲು ಸಮರ್ಥರಾದರೆಂಬುದು ಸಾಹಿತ್ಯದ ಯಾವ ವಿದ್ಯಾರ್ಥಿಯನ್ನೇ ಆಗಲಿ, ಚಕಿತಗೊಳಿಸುವ ವಿಷಯವಾಗಿದೆ.

ವಚನಕಾರರಲ್ಲಿ ಅನೇಕರು ತಮ್ಮ ಆಧ್ಯಾತ್ಮಿಕ ಅನುಭವಗಳನ್ನೂ ಆಡುಮಾತಿನ ಮೂಲಕ ಪ್ರಕಟಪಡಿಸಿದ್ದಾರೆ. ಒಬ್ಬ ಬಡಗಿ ಅಥವಾ ತುರುಗಾಹಿ ಅಥವಾ ಬೆಸ್ತ ತನ್ನದೇ ಆದ ಶಬ್ದಗಳಿಂದಲೂ ಪದಪುಂಜಗಳಿಂದಲೂ ಕೂಡಿದ ಉಪಭಾಷೆಯನ್ನು[1] ತನ್ನ ವೃತ್ತಿಗೆ ಸಂಬಂಧಿಸಿದ ಅರ್ಥದಲ್ಲಿ-ಹೊಂದಿರುತ್ತಾನೆ. ಅನೇಕ ಕಾಯಕಗಳನ್ನೂ ಅಥವಾ ವೃತ್ತಿಗಳನ್ನು ಅನುಸರಿಸುತ್ತಿದ ವಚನಕಾರರು ತಮ್ಮ ಭಾವನೆಗಳನ್ನು ವ್ಯಕ್ತಪಡಿಸಲು ತಮ್ಮ ವೃತ್ತಿಗೆ ಸಂಬಂಧಪಟ್ಟ ಪದಗಳನ್ನೇ ಬಳಸಿಕೊಂಡಿದ್ದಾರೆ. ಉದಾಹರಣೆಗೆ, ತುರುಗಾಹಿಯೊಬ್ಬನ ಉಸ್ತುವಾರಿಯಲ್ಲಿರುವ ದನಗಳೇ ಅವನ ಸಂವೇದನೆಗಳನ್ನು ಪ್ರತಿನಿಧಿಸಬಹುದು ಹಾಗೂ ಅವನು ತನ್ನ ಆಧ್ಯಾತ್ಮಿಕ ಅನುಭವಗಳನ್ನು ಸೂಚಿಸಲು ಚಾಟಿ ಅಥವಾ ದನಗಳಂತಹ ಪದಗಳನ್ನು ಬಳಸಬಹುದು. ಕ್ಷೌರಿಕನೊಬ್ಬನ ಸಂದರ್ಭದಲ್ಲಿ ಕನ್ನಡಿ, ಕತ್ತರಿ, ಬಾಚಣಿಗೆ ಹಾಗೂ ಕ್ಷೌರದ ಕತ್ತಿಗಳು ಮತ್ತು ಕ್ಷೌರಕಾರ್ಯ - ಇವೇ ಅವನ ಸಾಧನೆಗೆ ಸಂಬಂಧಿಸಿದ ವಿಷಯಗಳನ್ನೂ ಅನುಭವಗಳನ್ನೂ ಸಂಕೇತೀಕರಿಸಬಹುದು. ಇಂತಹ ಸಾಂಕೇತಿಕ ಅಭಿಪ್ರಾಯ ಪ್ರಕಟಣೆಗಳು ವಚನಸಾಹಿತ್ಯದ ಶ್ರೀಮಂತಿಕೆ ಹಾಗೂ ವೈವಿಧ್ಯಗಳನ್ನೂ ಹೆಚ್ಚಿಸಿವೆಯಾದರೂ ಅವುಗಳಲ್ಲಿ ಹಲವು ಗೂಢ ಪ್ರಶ್ನೆಗಳಾಗಿಯೇ ಉಳಿದಿವೆ. ಮತ್ತು ಅವುಗಳ ಸರಿಯಾದ ಅರ್ಥ ವಿವರಣೆ ಮಾಡುವುದು ಸಾಧ್ಯವಾಗಿಲ್ಲ. ಅದೇನೇ ಇರಲಿ, ಈ ಅನುಭಾವಿಗಳು ತಮ್ಮ 'ಕಾಯಕ'ದ

---

1. ಭೌಗೋಳಿಕ ಉಪಭಾಷೆ ಅಥವಾ ಬರಿಯ 'ಉಪಭಾಷೆ'ಯೆಂಬ ಪದದಿಂದ ವ್ಯತ್ಯಾಸ ತೋರಿಸಲು ಇಲ್ಲಿ ಉಪಭಾಷೆಯೆಂಬುದನ್ನು 'ಸಾಮಾಜಿಕ' ಅಥವಾ 'ವೃತ್ತಿಗೆ ಸಂಬಂಧಿಸಿದ ಭಾಷೆ' ಎಂಬ ಅರ್ಥದಲ್ಲಿ ಬಳಸಲಾಗಿದೆ.

ಚೌಕಟ್ಟಿನಲ್ಲಿ ಹಾಗೂ ಆಡುನುಡಿಯ ಮೂಲಕವೇ ತಮ್ಮ ಅನುಭವಗಳನ್ನೂ ಅಭಿವ್ಯಕ್ತಿಗೊಳಿಸಿದ್ದು ಮಾತ್ರ ಯಾರನ್ನೇ ಆಗಲಿ, ಅಚ್ಚರಿ ಗೊಳಿಸುವ ವಿಚಾರವಾಗಿದೆ.

ಅಲ್ಲದೆ ಸಾಹಿತ್ಯಿಕ ದೃಷ್ಟಿಯಿಂದ ಅಥವಾ ಗಂಭೀರ ಸಾಹಿತ್ಯ ರಚನೆಯ ದೃಷ್ಟಿಯಿಂದ ಕೂಡ ಅನೇಕ ವಚನಕಾರರು ಕಿರಿಯರಾಗಿ ಅಥವಾ ಅಮುಖ್ಯ ರಾಗಿ ಕಾಣಬಹುದು. ಆದರೆ ಸಾಮಾಜಿಕ ಕ್ರಾಂತಿಯ ದೃಷ್ಟಿಯಿಂದ, ವಚನ ಸಾಹಿತ್ಯದ ಪ್ರಮಾಣ ಹಾಗೂ ಗಾತ್ರಗಳೇ ಮಹತ್ವದ್ದಾಗಿ ಕಾಣುತ್ತವೆ. ಇದರ ಕೀರ್ತಿಗೆ ಬಸವಣ್ಣನವರೂ ಅವರ ಅನುಯಾಯಿಗಳೂ ಪಾತ್ರರಾಗಿದ್ದಾರೆ.

ವಚನಗಳು ನಾಡಿನ ಮಣ್ಣಿನಿಂದ ಅರಳಿದ ಹೂಗಳಾಗಿವೆ. ಇವುಗಳ ಭಾಷೆ, ಶೈಲಿ, ಸ್ವರೂಪ ಮತ್ತು ಉದ್ದೇಶಗಳು ಸಂಪೂರ್ಣವಾಗಿ ಜಾನಪದ ಶೈಲಿಯ ದಾಗಿವೆ. ವಚನಸಾಹಿತ್ಯದ ಮೇಲೆ ಯಾವುದೇ ಬಾಹ್ಯ ಪ್ರಭಾವವನ್ನು ಗುರುತಿ ಸುವುದು ಸಾಧ್ಯವಿಲ್ಲ. ವಚನಗಳ ಶ್ರೇಷ್ಠವೂ ಪ್ರಾತಿನಿಧಿಕವೂ ಆದ ಸಂಕಲನ ವನ್ನು, ಯಾವುದೇ ಅನುಮಾನವೂ ಇಲ್ಲದೆ, ಭಾರತೀಯ ಹಾಗೂ ವಿಶ್ವ ಸಾಹಿತ್ಯಕ್ಕೆ ಕನ್ನಡ ಭಾಷೆ ನೀಡಿರುವ ವಿಶೇಷ ಹಾಗೂ ಮಹತ್ವದ ಕೊಡುಗೆ ಎಂದು ಭಾವಿಸಬಹುದು.

# 11. ಉಪಸಂಹಾರ

ಬಸವಣ್ಣನವರು ಶಿವೈಕ್ಯರಾಗಿ 800 ವರ್ಷಗಳಿಗಿಂತ ಹೆಚ್ಚು ಕಾಲ ಸಂದು ಹೋಗಿದ್ದರೂ ಕರ್ನಾಟಕದ ಪ್ರಮುಖ ಸಮುದಾಯವೊಂದನ್ನು ರೂಪಿಸಿ ದಂಥ ಅನುಯಾಯಿಗಳ ಮನಸ್ಸಿನಲ್ಲಿ ಅವರ ನೆನಪು ಇಂದಿಗೂ ನೂತನ ವಾಗಿ ಉಳಿದಿದೆ. ವೀರಶೈವರು ತುಂಬು ಹೃದಯದಿಂದ ಅವರನ್ನು 'ಬಸವಣ್ಣ' ಎಂದು ಸ್ಮರಿಸಿಕೊಳ್ಳುತ್ತಾರೆ. ವೀರಶೈವ ಲಿಪಿಕಾರರು ಪ್ರತಿ ತೆಗೆದ ಅನೇಕ ತಾಳೆಯೋಲೆ ಹಸ್ತಪ್ರತಿಗಳು 'ಶ್ರೀ ಬಸವಲಿಂಗಾಯ ನಮಃ' ಎಂಬ ಪ್ರಾರಂಭ ವಾಕ್ಯದೊಂದಿಗೆ ಆರಂಭವಾಗಿವೆ. ಅಪಾಯ ಹಾಗೂ ದುರಂತಗಳು ಸಂಭವಿಸಿದಾಗಲೆಲ್ಲ, ಅವು ಪರಿಹಾರವಾಗಲೆಂಬ ಆಶಯದಿಂದ, ಗ್ರಾಮ ಸ್ಥರು 'ಬಸವ' 'ಬಸವ' ಎಂದು ಜಪಿಸುತ್ತಾರೆ. ಪ್ರತಿವರ್ಷ ಬಸವಣ್ಣನವರ ಜಯಂತ್ಯುತ್ಸವದ ಆಚರಣೆಗಾಗಿ ಜೂನ್ ತಿಂಗಳಲ್ಲಿ ಒಂದು ದಿನಾಂಕವನ್ನು ಮೀಸಲಾಗಿಡಲಾಗಿದೆ. ಆ ದಿನ ಅಶಿಕ್ಷಿತರೂ ತಮ್ಮ ಮನೆಗಳನ್ನು ಸ್ವಚ್ಛಗೊಳಿ ಸುತ್ತಾರೆ; ಶುದ್ಧಿ ಸ್ನಾನ ಮಾಡುತ್ತಾರೆ; ಹೊಸ ವಸ್ತ್ರ ಧರಿಸುತ್ತಾರೆ; ಶಿವ ದೇವಾಲಯಗಳಿಗೆ ಹೋಗುತ್ತಾರೆ  ಮತ್ತು ಶಿವನ ಪೂಜೆ ಮಾಡುತ್ತಾರೆ; ಇದು ವಿಶೇಷ ಅಡಿಗೆಯನ್ನು ತಯಾರಿಸಿ ದೇವರಿಗೆ ನೈವೇದ್ಯ ಮಾಡಿ ಪ್ರಸಾದ ಸ್ವೀಕರಿಸುವ ದಿನವೂ ಹೌದು. ಬಸವಣ್ಣನವರು ಹಾಗೂ ಅವರ ಕ್ರಾಂತಿಯ ನೆನಪಿನಲ್ಲಿ ನಗರ ಹಾಗೂ ಪಟ್ಟಣಗಳಲ್ಲಿ ಉಪನ್ಯಾಸಗಳನ್ನೂ ಪುರಾಣ ಪ್ರವಚನಗಳನ್ನೂ ವ್ಯವಸ್ಥೆಗೊಳಿಸುತ್ತಾರೆ. ಬಸವಣ್ಣನವರ ನಿಕಟವರ್ತಿ ಯಾಗಿದ್ದ ಸಿದ್ಧರಾಮನು 'ಬಸವಣ್ಣನ ನೆನಹು ಸುಖ ಸಮುದ್ರವಯ್ಯಾ' ಎಂದು ಉದ್ಗರಿಸಿದ್ದಾನೆ. ಇಷ್ಟೊಂದು ಸೊಗಸಾದ ರೀತಿಯಲ್ಲಿ ಬಸವಣ್ಣ ನವರ ಅನುಯಾಯಿಗಳ ಮನೋಭಾವನೆಗಳನ್ನು ಪ್ರತಿಬಿಂಬಿಸುವ ಇನ್ನೊಂದು ಹೇಳಿಕೆಯ ಬಗ್ಗೆ ಆಲೋಚಿಸುವುದೇ ಸಾಧ್ಯವಿಲ್ಲ.

ಕಾಲಕ್ರಮೇಣ ಬಸವಣ್ಣನವರ ಸಾಮಾಜಿಕ ಹಾಗೂ ಧಾರ್ಮಿಕ ಕ್ರಾಂತಿ, ವ್ಯವಸ್ಥಿತ ಧರ್ಮವೊಂದರ ಎಲ್ಲ ಲಕ್ಷಣಗಳನ್ನೂ ಹೊಂದಿದ ಪರಿಕರಗಳನ್ನು ಗಳಿಸಿತು. ದಿನಗಳುರುಳಿದಂತೆ, ಅದು ಹೆಚ್ಚು ಹೆಚ್ಚು ಜನರನ್ನು ಆಕರ್ಷಿ ಸಿತು ಹಾಗೂ ವೀರಶೈವ ಧರ್ಮ ಪ್ರಸಾರಕರು ಅತ್ಯುತ್ಸಾಹದಿಂದ ಧರ್ಮ ಪ್ರಚಾರ ಮಾಡಿದರು. ವೀರಶೈವ ಧರ್ಮವನ್ನು ಜನಪ್ರಿಯಗೊಳಿಸಲು ತಮ್ಮ ಎಲ್ಲ ಪ್ರಯತ್ನಗಳನ್ನೂ ಮಾಡಿದರು. ಇವರಲ್ಲಿ ಮಹಾ ಅನುಭಾವಿಗಳೂ, ರಾಜ

ನೀತಿಜ್ಞರೂ, ಕವಿ-ದಾರ್ಶನಿಕರೂ, ವಿದ್ವಾಂಸರೂ ಸೇರಿದ್ದರು. ನಿಜವಾಗಿಯೂ ಧಾರ್ಮಿಕ ಕ್ರಾಂತಿಕಾರನಾಗಿದ್ದ 'ಸರ್ವಜ್ಞ'[1] ಎಂಬ ಒಬ್ಬ ಕವಿಯಿದ್ದ (ಕ್ರಿ.ಶ.1600). ಆದರೆ ಅವನು ಸಮರ್ಪಣ ಮನೋಭಾವದ ಕೆಲಸಗಾರರ ತಂಡವನ್ನೇನೂ ಕಟ್ಟಲಿಲ್ಲ. ಹೀಗಾಗಿ ಅವನು ವ್ಯಕ್ತಿಶಕ್ತಿಯಾಗಿಯೇ ಉಳಿದ. ಸರ್ವಜ್ಞನ ವಚನಗಳು-ಇವು ನಿಜವಾಗಿಯೂ ಮೂರು ಸಾಲಿನ ತ್ರಿಪದಿಗಳು-ತುಂಬ ಜನಪ್ರಿಯವಾಗಿದ್ದವು ಹಾಗೂ ಅವು ಅದೇ ಜನಪ್ರಿಯತೆಯನ್ನು ಇಂದಿಗೂ ಉಳಿಸಿಕೊಂಡಿವೆ. ಆದರೆ ಇವನ ವಚನಗಳು ಸಮಾಜದ ಮೇಲೆ ಯಾವುದಾದರೂ ಪ್ರಭಾವವನ್ನು ಬೀರಿವೆಯೇ ಎಂಬುದನ್ನು ಹೇಳುವ ಸ್ಥಿತಿಯಲ್ಲಿ ನಾವಿಲ್ಲ.

ಬಸವಣ್ಣನವರು ಹಾಗೂ ಅವರ ಅನುಯಾಯಿಗಳಿಂದ ಚೆನ್ನಾಗಿ ಅಭಿವೃದ್ಧಿಗೊಂಡ ವಚನ ಪರಂಪರೆಯನ್ನು ಅನಂತರದ ಶರಣರು ಮುಂದುವರಿಸಲಿಲ್ಲ. ಬಸವಣ್ಣನವರ ಅನಂತರದ ಕವಿಗಳು, ವಚನಗಳನ್ನು ಬರೆಯುವುದಕ್ಕಿಂತ ಕವನಗಳನ್ನೂ ದೀರ್ಘಕಾವ್ಯಗಳನ್ನೂ ಬರೆಯುವತ್ತಲೇ ಹೆಚ್ಚು ಒಲವು ತೋರಿಸಿದರು. ಆದರೆ ಬಸವಣ್ಣನವರ ಕ್ರಾಂತಿ ಕನ್ನಡ ಸಾಹಿತ್ಯದ ಮೇಲೆ ತನ್ನದೇ ಆದ ಒಂದು ಪ್ರಭಾವವನ್ನು ಬೀರಿದೆ. ಬಸವಣ್ಣನವರಿಗಿಂತ ಮೊದಲು, ಕವಿಗಳು ಕೃತಿರಚನೆಗೆ ಪುರಾಣವಸ್ತುಗಳನ್ನು ಮಾತ್ರ ಆರಿಸಿಕೊಳ್ಳುತ್ತಿದ್ದರು. ಬಸವಣ್ಣನವರನ್ನು ಅನುಸರಿಸಿದ ಮುಂದಿನ ವೀರಶೈವ ಕವಿಗಳು ಮಾನವನಿಗೆ ಸಂಬಂಧಿಸಿದ ವಸ್ತುಗಳನ್ನೂ ಆರಿಸಿಕೊಳ್ಳತೊಡಗಿದರು ಹಾಗೂ ಸರಳಭಾಷೆಯಲ್ಲಿ ಕೃತಿರಚನೆ ಮಾಡಿದರು. ಇತರ ಧರ್ಮಗಳಿಗೆ ಸೇರಿದ ಕವಿಗಳ ಮೇಲೆಯೂ ಇದು ಪ್ರಭಾವ ಬೀರಿತು.

ಬಸವಣ್ಣನವರು ಮತ್ತು ಇತರರು ರಚಿಸಿದ ವಚನಗಳ ಸಂಖ್ಯೆ ಅಧಿಕವಾಗಿರಬೇಕು. ಇವುಗಳ ಸಂಖ್ಯೆ ಅನೇಕ ದಶಲಕ್ಷ ಎಂದು ನಂಬಲಾಗಿದೆ. ಇವುಗಳಲ್ಲಿರುವ ಹಲವು ವಚನಗಳು ನಿರ್ಲಕ್ಷ್ಯದಿಂದಾಗಿ ಕಳೆದೇಹೋಗಿವೆ. ಅನೇಕ ವಚನಗಳು, ಹದಿಮೂರನೆಯ ಶತಮಾನದಲ್ಲಿ ಮುಸ್ಲಿಮರ ಆಕ್ರಮಣದ ಕಾಲದಲ್ಲಿ, ನಷ್ಟವಾಗಿ ಹೋಗಿವೆ. ಇಸ್ಲಾಮ್ ದುರಾಕ್ರಮಣದಿಂದ ಹಿಂದೂ ಧರ್ಮವನ್ನು ರಕ್ಷಿಸುವ ಉದ್ದೇಶದಿಂದ ಕ್ರಿ ಶ. 1336ರಲ್ಲಿ ವಿಜಯನಗರ ಸಾಮ್ರಾಜ್ಯದ ಸ್ಥಾಪನೆಯಾಯಿತು. ವಿಜಯನಗರದ ರಾಜರ ಉಪಕಾರ ಬುದ್ಧಿಯ ಆಶ್ರಯದಲ್ಲಿ ವಚನಗಳನ್ನು ಸಂಗ್ರಹಿಸಲಾಯಿತು. ಅವುಗಳನ್ನು ವ್ಯವಸ್ಥೆಗೊಳಿಸಲಾಯಿತು; ಹಾಗೂ ಹದಿನೈದನೆಯ ಶತಮಾನದಲ್ಲಿ ಅವುಗಳಿಗೆ ವ್ಯಾಖ್ಯಾನಗಳನ್ನೂ ಬರೆಯಲಾಯಿತು. ಈ ಹದಿನೈದನೆಯ

---

1. ಇದು ಅವನ ಕಾವ್ಯನಾಮವಾಗಿ ಕಾಣುತ್ತದೆ. ನಿಜವಾದ ಹೆಸರು ನಮಗೆ ಸರಿಯಾಗಿ ತಿಳಿದಿಲ್ಲ.

ಶತಮಾನದ ಕೆಲವು ಅನುಭಾವಿಗಳೂ ವಚನಗಳನ್ನು ರಚಿಸಿದ್ದಾರೆ. ಆದರೆ ಗುಣಮಟ್ಟದಲ್ಲಿ ಇವು ಹಿಂದಿನ ಕಾಲದ ವಚನಗಳಿಗೆ ಹೋಲುವುದಿಲ್ಲ. ಈವರೆಗೆ ಸಂಸ್ಕರಿಸಿ ಮುದ್ರಿಸಲಾದಂತಹ, ಬಸವಣ್ಣನವರ ಹಾಗೂ ಇತರ ವಚನಕಾರರ ವಚನಗಳ ಸಂಖ್ಯೆ ಸುಮಾರು 12,000ಕ್ಕೂ ಅಧಿಕವೆನಿಸಿದೆ. ಹೊಸ ಹೊಸ ಹಸ್ತಪ್ರತಿಗಳ ಸಂಶೋಧನೆಯೊಂದಿಗೆ ಪ್ರತಿವರ್ಷ ಹೆಚ್ಚು ಹೆಚ್ಚು ವಚನಗಳು ಸಿಗುತ್ತಿವೆ.

ಬಸವಣ್ಣನವರು ಪ್ರವಾದಿ, ಎಲ್ಲ ಪ್ರವಾದಿಗಳಂತೆ ಅವರಲ್ಲಿಯೂ ಕೆಲವು ದೌರ್ಬಲ್ಯಗಳಿದ್ದವು. ಅವರ ಇಡೀ ಬದುಕು, ಆತ್ಮ ಪರಿಪೂರ್ಣತೆ ಪಡೆಯುವ ದಿಕ್ಕಿನಲ್ಲಿನ ಒಂದು ಪ್ರಯತ್ನವಾಗಿತ್ತು; ಒಂದು ಹೋರಾಟವಾಗಿತ್ತು ಎಂಬ ಸಂಗತಿಯಿಂದಲೇ ಅವರು ಜನ್ಮತಃ ಸಿದ್ಧರಲ್ಲವೆಂಬುದನ್ನು ನಮಗೆ ಸ್ಪಷ್ಟವಾಗಿ ತೋರಿಸುತ್ತದೆ. ಅವರು ಬೋಧಿಸಿದ ಹಾಗೂ ಆಚರಿಸಿದ ಎಲ್ಲವನ್ನೂ ಮೆಚ್ಚಲು ನಮಗೆ ಸಾಧ್ಯವಾಗದೆ ಇರಬಹುದು. ಅವರ ಹಲವು ನಡೆನುಡಿಗಳನ್ನು ಆ ಕಾಲದ ಸಮಾಜದ ದೃಷ್ಟಿಯಿಂದ ಪರಿಶೀಲಿಸಬೇಕಾಗುತ್ತದೆ. ಆಗ ಮಾತ್ರ ಅವು ನಮಗೆ ಅರ್ಥಪೂರ್ಣವಾಗಿ ಕಾಣಲು ಸಾಧ್ಯ. ಈ ದೌರ್ಬಲ್ಯಗಳೇ ಬಸವಣ್ಣನವರನ್ನು ಹೆಚ್ಚು ಮಾನವೀಯ ಗುಣಗಳನ್ನುಳ್ಳವರಾಗಿಯೂ ಹೆಚ್ಚು ಪ್ರೀತಿಪಾತ್ರರನ್ನಾಗಿಯೂ ಮಾಡಿವೆ.

ಈ ಕಾಲದ ವೀರಶೈವ ಸಮಾಜ, ಬಸವಣ್ಣನವರ ಕನಸುಗಳ ಸಮಾಜವಾಗಿಲ್ಲದೆ ಇರಬಹುದು. ಆದರೆ ಯಾವ ಧರ್ಮ ಅಥವಾ ಸಮಾಜ ತಾನೇ ಆದರ ಪ್ರವಾದಿಗಳ ಕನಸುಗಳ ಹತ್ತಿರ ಹತ್ತಿರ ಬರಲು ಸಾಧ್ಯ? ಆದಾಗ್ಯೂ ಬಸವಣ್ಣನವರ ಬಗ್ಗೆ ಕೈಗೊಳ್ಳುವ ಅಧ್ಯಯನದಿಂದ ಅವರ ಬೋಧನೆಗಳು ಇಂದಿನ ಪ್ರಪಂಚಕ್ಕೂ ಅನ್ವಯಿಸುತ್ತವೆ ಎಂಬುದು ಅರಿವಾಗುತ್ತದೆ. ಪ್ರೇಮ, ದಯೆ, ಸತ್ಯ; ಮಾನವರೆಲ್ಲ ಸರಿಸಮಾನರೆಂಬ ಅವರ ಸಂದೇಶ, ಸಮಾಜದ ಎಲ್ಲ ಸದಸ್ಯರೂ 'ಕಾಯಕ'ವೊಂದನ್ನು ಕೈಗೊಳ್ಳಬೇಕೆಂಬ ನಿರ್ಬಂಧ; ಅವರ ಸಾಮಾಜಿಕ ದೃಷ್ಟಿಕೋನ; ಬಡವರು ಹಾಗೂ ಶೋಷಿತರ ಬಗ್ಗೆ ಅವರಿಗಿದ್ದ ಪ್ರೀತಿ, ಅನುಕಂಪ-ಇವುಗಳನ್ನು ಹಳೆಯ ಕಾಲದ ವ್ಯಕ್ತಿಯೊಬ್ಬನ ಉಪದೇಶಗಳೆಂದು ಕಡೆಗಣಿಸಲು ಎಂದಿಗೂ ಸಾಧ್ಯವಿಲ್ಲ.

ಬೆಳಗಾವಿಯಲ್ಲಿ ನಡೆದ ಭಾರತದ ರಾಷ್ಟ್ರೀಯ ಕಾಂಗ್ರೆಸ್ಸಿನ ಅಧ್ಯಕ್ಷತೆ ವಹಿಸಿದ್ದ ಮಹಾತ್ಮಾ ಗಾಂಧೀಜಿಯವರು, ತಾವು ಅಂದು ಭಾರತದಲ್ಲಿ ಮಾಡಲು ಪ್ರಯತ್ನಿಸುತ್ತಿರುವುದನ್ನು ಒಂದು ಬಗೆಯಲ್ಲಿ ಬಸವಣ್ಣನವರು ಕ್ರಿ.ಶ. ಹನ್ನೆರಡನೆಯ ಶತಮಾನದಲ್ಲಿಯೇ ಮಾಡಿಬಿಟ್ಟಿದ್ದರು ಎಂದು ಹೇಳಿದರಂತೆ. ಆಧುನಿಕ ಕಾಲದ ಭಾರತದ ಅತ್ಯಂತ ದೊಡ್ಡ ಸಮಾಜ ಸುಧಾರಕರಾದ ಗಾಂಧೀಜಿಯವರಿಂದ ಬಸವಣ್ಣನವರಿಗೆ ಇಂಥ ಗೌರವ ಲಭಿಸಿದೆ. ನವ್ಯ ಪಂಥದ ಕವಿಗಳೂ ಸಾಹಿತಿಗಳೂ ಸಾಮಾನ್ಯವಾಗಿ ಹಳಗನ್ನಡ ಸಾಹಿತ್ಯದ

ಬಗ್ಗೆ ಅಷ್ಟೇನೂ ಸಹಾನುಭೂತಿಪರರಾಗಿಲ್ಲ; ಆದರೂ ಅವರು ವಚನ ಸಾಹಿತ್ಯವನ್ನು ಗಂಭೀರವಾಗಿ ತೆಗೆದುಕೊಂಡು ಅದರ ಜಾಗರೂಕ ಅಧ್ಯಯನ ನಡೆಸಿದ್ದಾರೆ. ಬಸವಣ್ಣನವರನ್ನು ಕುರಿತ ಅಧ್ಯಯನವೊಂದು ನಮ್ಮ ಕಾಲಕ್ಕೊ-ಸಾಮಾಜಿಕ ಇತಿಹಾಸ ಹಾಗೂ ಸಾಹಿತ್ಯ ಇವೆರಡೂ ದೃಷ್ಟಿಗಳಿಂದ ಹೇಗೆ ಸಂಗತವಾಗಿದೆ ಎಂದು ತೋರಿಸಲು ಈ ಎರಡು ವಿಚಾರಗಳನ್ನು ಕುರಿತು ಇಲ್ಲಿ ಪ್ರಸ್ತಾಪಿಸಲಾಗಿದೆ.

# ಗ್ರಂಥಸೂಚಿ

## ಪ್ರಾಚೀನ ಕನ್ನಡ ಕೃತಿಗಳು


ಅಕ್ಕನ ವಚನಗಳು (ಸಂ.ಎಲ್.ಬಸವರಾಜು, ಮೈಸೂರು, 1966)

ಅಲ್ಲಮನ ವಚನಚಂದ್ರಿಕೆ (ಸಂ.ಎಲ್.ಬಸವರಾಜು, ಮೈಸೂರು, 1966)

ಬಸವಣ್ಣನವರ ವಚನಗಳು (ಸಂ.ಎಸ್.ಎಸ್.ಬಸವನಾಳ, ಧಾರವಾಡ, 1962)

ಬಸವ ಪವಾಡ (ಸಂ.ಬಿ.ಎನ್. ಚಂದ್ರಯ್ಯ,ಮೈಸೂರು,1967)

ಬಸವಪುರಾಣ (ಸಂ.ಆರ್.ಸಿ. ಹಿರೇಮಠ , ಧಾರವಾಡ, 1958)

ಬಸವರಾಜದೇವರ ರಗಳೆ (ಸಂ.ಟಿ.ಎಸ್. ವೆಂಕಣ್ಣಯ್ಯ, ಮೈಸೂರು, 1965)

ಚನ್ನಬಸವಣ್ಣನವರ ವಚನಗಳು (ಸಂ.ಆರ್. ಸಿ. ಹಿರೇಮಠ , ಧಾರವಾಡ, 1965)

ಚೋರ ಬಸವಚರಿತೆ (ಬಳ್ಳಾರಿ,1886)

ದೇವರ ದಾಸಿಮಯ್ಯನ ವಚನಗಳು (ಸಂ.ಎಸ್. ಬಸವರಾಜು, ಮೈಸೂರು, 1970)

ಲಿಂಗಲೀಲಾ ವಿಲಾಸ ಚರಿತ್ರೆ (ಸಂ.ಎಲ್.ಎಸ್.ಭೂಸನೂರಮಠ , ಧಾರವಾಡ, 1956)

ಮೋಳಿಗೆ ಮಾರಯ್ಯ ಮತ್ತು ರಾಣಿ ಮಹಾದೇವಿಯ ವಚನಗಳು (ಸಂ.ಚನ್ನಪ್ಪ ಉತ್ತಂಗಿ ಮತ್ತು ಎಸ್.ಎಸ್. ಭೂಸನೂರ ಮಠ , ಧಾರವಾಡ, 1950)

ನೀಲಮ್ಮನ ವಚನಗಳು ಮತ್ತು ಲಿಂಗಮ್ಮನ ವಚನಗಳು (ಸಂ.ಆರ್.ಸಿ. ಹಿರೇಮಠ , ಧಾರವಾಡ, 1968)

ಸಮಯ ಪರೀಕ್ಷೆ (ಸಂ.ಬಿ.ಎಸ್.ಕುಲಕರ್ಣಿ, ಧಾರವಾಡ, 1958)

ಶಿವದಾಸ ಗೀತಾಂಜಲಿ (ಸಂ.ಎಲ್.ಬಸವರಾಜು, ಮೈಸೂರು, 1963)

ಶೂನ್ಯಸಂಪಾದನೆ (ಸಂ.ಎಸ್.ಎಸ್. ಭೂಸನೂರ ಮಠ, ರಾವೂರು, 1958)

ಶೂನ್ಯಸಂಪಾದನೆ (ಸಂ.ಎಲ್. ಬಸವರಾಜು, ಚಿತ್ರದುರ್ಗ, 1969)

ಸಿದ್ಧರಾಮ ಚರಿತ್ರೆ (ಸಂ.ಟಿ.ಎಸ್. ವೆಂಕಣ್ಣಯ್ಯ ಮತ್ತು ಡಿ.ಎಲ್.ನರಸಿಂಹಾಚಾರ್,ಶಿವಮೊಗ್ಗ, 1941)

ಸಿದ್ಧರಾಮ ಸಾಹಿತ್ಯ ಸಂಗ್ರಹ (ಸಂ.ಚನ್ನಪ್ಪ ಉತ್ತಂಗಿ, ಶೋಲಾಪುರ, 1955)

ವೃಷಭೇಂದ್ರ ವಿಜಯ (ಬಸವರಾಜವಿಜಯಂ) (ಸಂ.ಆರ್.ಸಿ. ಹಿರೇಮಠ, ಧಾರವಾಡ, 1968)

## ಆಧುನಿಕ ಕನ್ನಡ ಕೃತಿಗಳು

ಚಿದಾನಂದಮೂರ್ತಿ, ಎಂ. ಬಸವಣ್ಣನವರು (ಮೈಸೂರು, 1967) : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ (ಮೈಸೂರು,1966)

ಚಿಂತಾಮಣಿ ಹಳೇಪೇಟೆ: ಯುಗ ಪ್ರವರ್ತಕ ಬಸವಣ್ಣನವರು (ಮೈಸೂರು,1944)

ದೇಸಾಯಿ, ಪಿ.ಬಿ. : 'ಕರ್ನಾಟಕದ ಕಳಚೂರಿಗಳು' (ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ, 36,1-2, 37, 1 - 2)

ಗುಂಜಾಳ, ಎಸ್.ಆರ್.: ಬಸವ ಸಾಹಿತ್ಯ ದರ್ಪಣ (ಬೆಂಗಳೂರು,1967)

ಮುಗಳಿ, ಆರ್.ಎಸ್. : ಕನ್ನಡ ಸಾಹಿತ್ಯ ಚರಿತ್ರೆ (ಮೈಸೂರು, 1953)

ನರಸಿಂಹಾಚಾರ್ ಆರ್ : ಕರ್ನಾಟಕ ಕವಿ ಚರಿತೆ (ಸಂ. 1, ಬೆಂಗಳೂರು, ದ್ವಿತೀಯಮುದ್ರಣ,1961; ಸಂ ||, ಬೆಂಗಳೂರು, 1919; ಸಂ,||| ಬೆಂಗಳೂರು, 1929)

ಪಾಟೀಲ, ಮಲ್ಲನಗೌಡ: ಶ್ರೀ ಬಸವೇಶ್ವರರ ಮೇಲೆ ಹೊಸಬೆಳಕು (ಬೆಳಗಾವಿ, 1966)

ಶ್ರೀನಿವಾಸಮೂರ್ತಿ, ಎಂ.ಆರ್. : ಭಕ್ತಿಭಂಡಾರಿ ಬಸವಣ್ಣನವರು (ಬೆಂಗಳೂರು, 1931) ವಚನಧರ್ಮಸಾರ (ಮೈಸೂರು, 1946)

ಶ್ರೀಕಂಠಯ್ಯ, ಟಿ.ಎನ್ : 'ಮಹಾದೇವಿಯಕ್ಕನ ಕೆಲವು ವಚನಗಳು' (ಕಾವ್ಯ ಸಮೀಕ್ಷೆ, ಮೈಸೂರು, 1947)

**ತೆಲುಗು** (ಸಂ.ಎನ್.ವೆಂಕಟರಾವ್, 1952)
ಬಸವಪುರಾಣಮು

## ENGLISH

Desai, P.B.: *Basaveshwara and His Times* (Dharwar,1968)

Deveerappa, H. (Ed): *Vachanas of Basavanna* (Translations from Basava by L.M.A. Menezes and S.M. Angadi, Sirigere,1967)

Fleet, J.F.: *Dynasties of the kanarese Districts* (Bombay Gazetteer, I,ii, 1896)

Gopal, B.R.: *Later Chalukyas of Kalyani* (Thesis, unpublished)

Hunashal, S.M.: *The Lingayat Movement* (Dharwar,1947)

Kane, P.V.: *History of Dharmashastra, II* (parts I and 2, Poona, 1941)

Kuppuswami Iyengar, G.R.: *Kalachuries of Kalyani and their times,* (Thesis, unpublished)
Majumdar, R.C. (Ed): *The struggle for Empire* (Bombay, 1857)
Nandimath, S.C.: *A Handbook of Virashaivism* (Dharwar,1942)
Nilakanta Sastri, K.A.: *A History of South India* (Oxford,1966)
Ramanujan, A.K. and Krishnamurthi, M.G.: *Some Kannada Poems* (Calcutta,1967)
S.S. Wodeyer (Ed): *Sri Basaveshwara* (Bangalore, 1967)
Sakhare, M. : History and Philosophy of Lingayat Religion (being an introduction to Lingadharana Chandrika, Belgaum, 1947)
Surendranath Dasgupta: *A History of Indian Philosophy, Vol. v* (Cambridge,1962)

**ಶಾಸನಗಳು**

Epigraphia Indica, xxi
Bombay, Karnatak Inscriptions, I, part1
Annual Report on Indian Epigraphy for1956-57
Epigraphia carnatica, vols. iii and v
ಕಲಬುರ್ಗಿ, ಎಂ.ಎಂ.: ಶಾಸನಗಳಲ್ಲಿ ಶಿವಶರಣರು (ಧಾರವಾಡ, 1970)

Printed at Tarang Printers, Delhi